# ಹಾಡುಹಕ್ಕಿ ಅಂಬಿಕಾತನಯದತ್ತ

ಡಾ॥ ಜಿ. ಕೃಷ್ಣಪ್ಪ



ಕಾಮಧೇನು ಪುಸ್ತಕ ಭವನ
ನಂ. 5/1, ನಾಗಪ್ಪ ಬೀದಿ, ಶೇಷಾದ್ರಿಪುರ, ಬೆಂಗಳೂರು–560 020

**HAADUHAKKI AMBIKATANAYADATTA :** (A study of life and works of poet D.R. Bendre) by Dr. G. Krishnappa, # 22, Sri Gurudatta Nilaya, 1st Cross, Netaji Nagar, Mathikere, Bengaluru-560 054. Phone: 080-23603402, Mobile: 9972109209.

Published by: Prof. D.K. Shyamasundara Rao for Kamadhenu Pustaka Bhavana, # 5/1, Nagappa Street, Seshadripura, Bengaluru-560 020.

| | | |
|---|---|---|
| First Edition | : | December 1995 |
| Second Edition | : | December 2009 |
| Third Edition | : | August 2012 |
| Copyright | : | Dr. G. Krishnappa |
| Price | : | Rs. 75/- |
| Paper used | : | 70 GSM NS Maplitho |

| | | |
|---|---|---|
| ಹಕ್ಕುಗಳು | : | ಡಾ॥ ಜಿ. ಕೃಷ್ಣಪ್ಪ |
| ಮೊದಲನೆ ಮುದ್ರಣ | : | ಡಿಸೆಂಬರ್ 1995 : ಪ್ರತಿಗಳು : 1000<br>ಬೇಂದ್ರೆ ಶತಮಾನೋತ್ಸವ ವರ್ಷದ ಪ್ರಕಟಣೆ |
| ಎರಡನೆ ಮುದ್ರಣ | : | ಡಿಸೆಂಬರ್ 2009 |
| ಮೂರನೆ ಮುದ್ರಣ | : | ಆಗಸ್ಟ್ 2012 |

ಮುಖಪುಟ : ಹಾಡುಹಕ್ಕಿಯ ರೂಪ ಮೂವತ್ತರ ಪ್ರಾಯದಲ್ಲಿ
(ಕೃಪೆ : ಡಾ॥ ವಾಮನಬೇಂದ್ರೆ)

---

ಮುದ್ರಕರು : ಆರ್. ಶ್ರೀನಾಥ್, ಮಾಲೀಕರು, ಪರಿಶ್ರೀ ಪ್ರಿಂಟರ್ಸ್,
# 9, 4ನೇ ಕ್ರಾಸ್, ನಾಗಪ್ಪಬ್ಲಾಕ್, ಶ್ರೀರಾಮಪುರಂ,
ಬೆಂಗಳೂರು –560 021. ದೂರವಾಣಿ: 23128286, 32016398
email: parishree@yahoo.com; parishree@gmail.com

# ಅರ್ಪಣ

ನನ್ನ ಆದರಣೀಯ ಗುರುಗಳಾದ

ಪ್ರೊ. ಕೆ. ಅನಂತರಾಮು
ಮೈಸೂರು ವಿಶ್ವವಿದ್ಯಾನಿಲಯದ ಸಂಜೆ ಕಾಲೇಜು
ಮೈಸೂರು

ಅವರಿಗೆ

ಅತ್ಯಂತ ಗೌರವದಿಂದ

# ಮುನ್ನುಡಿ

ಆತ್ಮೀಯ ಸಹೋದರ ಜಿ. ಕೃಷ್ಣಪ್ಪ ಅವರ ಪ್ರಥಮಕೃತಿ 'ಹಾಡುಹಕ್ಕಿ ಅಂಬಿಕಾತನಯದತ್ತ' ಪುಟಗಳ ಸಂಖ್ಯೆಯಿಂದ ಚಿಕ್ಕದಾದರೂ, ವಿಷಯ ನಿರೂಪಣೆಯ ದೃಷ್ಟಿಯಿಂದ, ಹೃದಯವಂತಿಕೆಯ ದೃಷ್ಟಿಯಿಂದ, ವಿವೇಕ ಜಾಗೃತಿಯ ದೃಷ್ಟಿಯಿಂದ ಅತ್ಯಂತ ಬೆಲೆಯುಳ್ಳ ಮಹತ್ವದ ಕೃತಿ. ಆದುದರಿಂದಲೆ ಪ್ರೊ. ಕೆ. ಅನಂತರಾಮು ಅವರು ಈ ಗ್ರಂಥ ಪ್ರಕಟವಾಗಬೇಕು ಅಂದದ್ದು. ಮೈಸೂರಿನ ಬೇಂದ್ರೆ ಕಾವ್ಯಪ್ರೇಮಿ ಶ್ರೀಮತಿ ಮತ್ತು ಶ್ರೀ ರಂಗಧಾಮಯ್ಯ ಅವರು ಪ್ರಕಾಶಕರಾಗಿ ಮಂಗಲಹಾಡಲು ಒಪ್ಪಿಕೊಂಡಾಗ, ಮುನ್ನುಡಿ ರೂಪದ ಈ ಶುಭಮಂಗಲ ಗೀತ ಹಾಡಲು ನನಗೆ ಪರಮಸಂತೋಷ. ಪ್ರಿಯ ಜಿ. ಕೃಷ್ಣಪ್ಪ ಅವರ ಸಾಹಸಕ್ಕೆ, ಪ್ರೊ. ಕೆ. ಅನಂತರಾಮು ಅವರ ಸಹೃದಯಕ್ಕೆ ಹಾಗೂ ಶ್ರೀಮತಿ ಮತ್ತು ಶ್ರೀ ರಂಗಧಾಮಯ್ಯ ಅವರ ಶ್ರೀಮಂತಿಕೆಗೆ, ಸಾಹಿತ್ಯದ ಸರಸ ಪ್ರೀತಿಗೆ ನನ್ನ ಅನಂತ ನಮನಗಳು. ಮೂವರಿಗೂ ಹೃತ್ಪೂರ್ವಕ ಅಭಿನಂದನೆಗಳು.

ಕೃಷ್ಣಪ್ಪನವರ ಕೃತಿ ೬-೯-೯೫ರಂದು ನನಗೆ ತಲುಪಿದೊಡನೆ ಓದಿ ಆನಂದ ಪಟ್ಟೆ. ಮೈಸೂರಿನ, ಪ್ರಾದೇಶಿಕ ಸಾರಿಗೆ ಕಚೇರಿಯಲ್ಲಿ ಮೋಟಾರು ವಾಹನಗಳ ಹಿರಿಯ ನಿರೀಕ್ಷಕರಾಗಿರುವ ಕೃಷ್ಣಪ್ಪನವರು, ಈ ಹಿಂದೆ ಬೆಳಗಾವಿಯಲ್ಲಿರುವಾಗ ಏಳೆಂಟುವರ್ಷಗಳ ಪೂರ್ವದಲ್ಲಿ ಭೆಟ್ಟಿಯಾದದ್ದು. ಪ್ರಥಮ ಭೆಟ್ಟಿಯಲ್ಲಿಯೇ ಅವರು ತಮ್ಮ ದ.ರಾ.ಬೇಂದ್ರೆ ಅಭಿಮಾನದ ಮಹಾಪೂರದಲ್ಲಿ ನನ್ನನ್ನು ತೇಲಾಡಿಸಿಬಿಟ್ಟರು. ಬೇಂದ್ರೆ ಸಾಹಿತ್ಯ ಪ್ರಚಾರಕಾರ್ಯ ತನ್ನ ಜೀವನದ ಪ್ರಥಮ ಕರ್ತವ್ಯ ಎಂಬುದಾಗಿ ನುಡಿದರು. ನುಡಿದಂತೆ ನಡೆಯುವ ಹಿರಿಯ ಸತ್ತ್ವ-ಕೃಷ್ಣಪ್ಪ.

ಬೆಳಗಾವಿಯ ಕಮಲಮಹಲದ (ಕೋಟೆಯವಲಯ) ಹುಲ್ಲಗಾವಲದ ಮೇಲೆ ಬೇಂದ್ರೆ ಕವನಗಳ ಕಂಠಪಾಠಸ್ಪರ್ಧೆಯನ್ನು ಪ್ರೌಢಶಾಲೆಯ

ವಿದ್ಯಾರ್ಥಿಗಳಿಗಾಗಿ ಸಂಯೋಜಿಸಿದರು, ಅನಂತರ ಅವರಿಗೆ ಕೆ.ಜಿ.ಎಫ್.ಗೆ ವರ್ಗವಾಯಿತು. ದೊಡ್ಡ ಪೊನ್ನಾಂಡಹಳ್ಳಿ ಗಡಿ ಪ್ರದೇಶದಲ್ಲಿ–ಬೇಂದ್ರೆ ಕವನ ಕಂಠಪಾಠ ಸ್ಪರ್ಧೆ ಸಂಯೋಜಿಸಿ, ಹಲವು ತಾಸಿನ ಕಾರ್ಯಕ್ರಮ ಸುರಸ್ವಪ್ನದಂತೆ ಆಗುಮಾಡಿದರು. ಮೈಸೂರಿಗೆ ಹೋದ ಮೇಲೆ ಅವರು ಬೇಂದ್ರೆ ಸಾಹಿತ್ಯ ಉಪಾಸನೆಯನ್ನು ಕುಟುಂಬದ ದಿನಚರಿಯಾಗಿ ಮಾಡಿ, ಪತ್ನಿ ಹಾಗೂ ಮಕ್ಕಳೊಂದಿಗೆ ಬೇಂದ್ರೆ ಪ್ರಾರ್ಥನಾಗೀತ ಪಠನವನ್ನು ಪ್ರಾರಂಭಿಸಿದರು. ಇಷ್ಟಕ್ಕೆ ನಿಲ್ಲದೆ, ಬೇಂದ್ರೆ ಸಾಹಿತ್ಯ ಪ್ರಚಾರ ಕಾರ್ಯಕ್ಕೆ ಸಮರ್ಥನಾಗುವ ಒಂದೇದೃಷ್ಟಿಯಿಂದ ಮೈಸೂರು ವಿಶ್ವವಿದ್ಯಾನಿಲಯದಿಂದ ಎಂ.ಎ. ಕನ್ನಡ ಪದವಿಯನ್ನು ಪಡೆದರು. ಅವರು ಸಂಪರ್ಕಮಾಡಿದಾಗಿನಿಂದ, ನಮ್ಮಿಂದ ಬೇಂದ್ರೆ ಸಾಹಿತ್ಯವನ್ನು ದೊಡ್ಡ ಪ್ರಮಾಣದಲ್ಲಿ ಕೊಂಡು, ಮೈಸೂರಿನ ಸುತ್ತುಮುತ್ತು ಬೇಂದ್ರೆ ಕೃತಿಗಳನ್ನು ಉಚಿತವಾಗಿ ಹಂಚುತ್ತಿದ್ದಾರೆ. ಈ ಸಾಹಿತ್ಯಭಕ್ತಿ ಅತ್ಯಂತ ವಿರಳ. ಕೀರ್ತಿಶೇಷ ಜಿ.ಪಿ. ರಾಜರತ್ನಂ ಅವರ ಗರಡಿ ಮನೆಯಲ್ಲಿ ಸಾಧನೆ ಮಾಡಿದ ಹಾಗೆ ಈ ಕನ್ನಡ ಭಕ್ತ ಇದಕ್ಕಿಂತ ಬೇರೆ ರೀತಿಯಲ್ಲಿ ನಡೆಯುವುದು ಅಸಾಧ್ಯ. ಈಹೊಗಳಿಕೆ ಕೃಷ್ಣಪ್ಪನವರಿಗೆ ಬೇಡಾದ, ತ್ಯಾಜ್ಯವಾದ ವಿಷಯ, ಕರ್ಮದ ಫಲವನ್ನು ಈ ರೀತಿಯಲ್ಲಿ ಅಪೇಕ್ಷಿಸುವವರು ಅವರಲ್ಲ ಎಂಬುದು ನನಗೆ ಚೆನ್ನಾಗಿ ಗೊತ್ತು. ತನು,ಮನ, ಧನದಿಂದ ಸಾಹಿತ್ಯ ಸೇವೆಮಾಡಿದ್ದು ಸ್ಮರಿಸುವುದು ಅಂಬಿಕಾತನಯದತ್ತ ವೇದಿಕೆಯ ಕರ್ತವ್ಯ. ಆ ದೃಷ್ಟಿಯಿಂದ ಕೃಷ್ಣಪ್ಪನವರ ಅವಿರತ ಸೇವೆಗೆ ಹೃತ್ಪೂರ್ವಕ ಧನ್ಯವಾದಗಳು.

ಮೈಸೂರಿನ ಜಯಪುರದ–ಶ್ರೀ ರಾಘವೇಂದ್ರ ವಿದ್ಯಾಪೀಠದ ಪ್ರೌಢಶಾಲೆಯಲ್ಲಿ ಬೇಂದ್ರೆ ವೇದಿಕೆಯನ್ನು ಕಳೆದ ವರ್ಷ ಪ್ರಾರಂಭಿಸಿ, ೧೯೯೫–೯೬ರ ಬೇಂದ್ರೆ ಜನ್ಮಶತಮಾನೋತ್ಸವ ವರ್ಷದ ಸ್ಮರಣೆಯಿಂದ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಾರೆ. ೧೭–೮–೯೫ರ–ಮೈಸೂರಿನ–ಸಿ.ಎಫ್.ಟಿ.ಆರ್.ಐ. ದಲ್ಲಿಯ ಶ್ರಾವಣವೈಭವ; ೧೯–೮–೯೫ರ ಚಾಮುಂಡಿಬೆಟ್ಟದ ಸುಬ್ಬರಾಯ ಪ್ರೌಢಶಾಲೆಯ ಕಾರ್ಯಕ್ರಮ; ೨೮–೮–೯೫ರ ಬನುಮಯ್ಯ ಪದವಿಪೂರ್ವ ಕಾಲೇಜಿನ ಕಾರ್ಯಕ್ರಮ; ೨೭–೮–೧೯೯೫ರ 'ಧ್ವನ್ಯಾಲೋಕ'ದ ಕಾರ್ಯಕ್ರಮಗಳಲ್ಲಿ, ೧–೧೦–೯೫ರ ಚಿಲ್ಡ್ರನ್ಸ್ ಲಿಟರರಿ ಕ್ಲಬ್‌ನ ಕಾರ್ಯಕ್ರಮ; ೨೦–೧೧–೯೫ರ ಗುಂಡ್ಲು ಪೇಟೆಯ ಕೆ.ಎಸ್. ನಾಗರತ್ನಮ್ಮ

ಪ್ರೌಢಶಾಲೆಯ ಕಾರ್ಯಕ್ರಮಗಳು ಕೃಷ್ಣಪ್ಪನವರ ಸಹಕಾರ, ಸಹಯೋಗ ಅವರ ಕಾರ್ಯಶಕ್ತಿಯ ಹಾಗೂ ಸ್ನೇಹವಲಯದ ಪ್ರತೀಕವಾಗಿದೆ. ಅವರ ಸ್ನೇಹಶಕ್ತಿಗೆ ಸತತ ಜಯವಾಗಲಿ ಎಂಬುದೇ ಹಾರೈಕೆ.

'ಹಾಡುಹಕ್ಕಿ ಅಂಬಿಕಾತನಯದತ್ತ'- ಕೃತಿಯಲ್ಲಿ ಕವಿಯ ಜನನದಿಂದ ಮರಣದವರೆಗಿನ ಪ್ರಮುಖ ಘಟ್ಟಗಳಾದ ಹುಟ್ಟು, ವಿದ್ಯಾಭ್ಯಾಸ, ಸಂಸಾರಿಕ ಜೀವನ, ಸಂತಾನ, ಜೀವನವೃತ್ತಿ, ಸಾಹಿತ್ಯಸಾಧನೆ ಹಾಗೂ ಸಿದ್ಧಿಗಳ ದರ್ಶನವನ್ನು ಅತ್ಯಂತ ಸೂತ್ರ ಬದ್ಧವಾಗಿ, ಸ್ಫಟಿಕ ಸದೃಶವಾಗಿ, ಸಂಶಯಗಳಿಗೆ ಎಡೆಗೊಡದಂತೆ ನಿರೂಪಿಸಿದ್ದಾರೆ. ಅನೇಕ ಆಕರ ಗ್ರಂಥಗಳ ಅವತರಣಿಕೆಗಳ ಉಲ್ಲೇಖದಿಂದ ತಮ್ಮ ದೃಷ್ಟಿಕೋನವನ್ನು ಸಮರ್ಥಿಸಿದ್ದಾರೆ. ಬೇಂದ್ರೆಯವರ ಕವನಗಳ ಅವತರಣಿಕೆಗಳಿಂದ ಅವು ಸಂಸ್ಮರಣೀಯ, ಚಿಂತನೀಯ ಎಂಬುದು ವಾಚಕರ ಗಮನಕ್ಕೆ ಬರುವಂತೆ ಮಾಡಿದ್ದಾರೆ. ಒಟ್ಟಿನಲ್ಲಿ ಕೃಷ್ಣಪ್ಪನವರ ಈ ಗದ್ಯ ಬರವಣಿಗೆ ಒಂದು ಗದ್ಯ ಭಾವಗೀತದಂತೆ ಮತ್ತು ಸರಸ ಸಣ್ಣ ಕಥೆಯಂತೆ ಅತ್ಯಂತ ಹೃದ್ಯವಾಗಿದೆ.

ಕುವೆಂಪು ಮತ್ತು ಅಂಬಿಕಾತನಯದತ್ತ, ಕನ್ನಡ ಕಾವ್ಯಪರಂಪರೆಯನ್ನು ನವೋದಯ, ನವ್ಯ ಮತ್ತು ಬಂಡಾಯ ಕಾವ್ಯಮಾರ್ಗದಲ್ಲಿ ಜೀವಂತವಾಗಿ ಕಾಪಾಡಿದ ಮಹನೀಯರು. ಇವರಿಬ್ಬರಲ್ಲಿ ಹಲವುಬಗೆಯ ಅಂತರಗಳ ಪ್ರಚಾರ ಮಾಡಿ, ವಾಚಕರನ್ನು ಎರಡು ದಂಡೆಗೆ ಎಳೆದುಕೊಂಡು ಹೋಗುವ ವಿಮರ್ಶಾಮಾರ್ಗ ಇದ್ದದ್ದು ಒಂದು ದುರಂತ. ಕೀರ್ತಿಶೇಷರಾಗಿರುವ ಇಬ್ಬರ ಪರಸ್ಪರ ಅಂತಃಕರಣದ ದರ್ಶವನ್ನು ಮಾಡಿಸಿ, ಕನ್ನಡ ಸಾಹಿತ್ಯದ ಅಭ್ಯಾಸಿಗಳ ಮುಂದಿನ ಪೀಳಿಗೆಯನ್ನಾದರೂ ಸಮನ್ವಯದ ಹಾದಿಯಲ್ಲಿ ನಡೆಸುವುದು ಅವಶ್ಯವಾದ ಕಾರ್ಯ. ಆ ಕಾರ್ಯವನ್ನು ಕೃಷ್ಣಪ್ಪನವರ ಈ ಬರವಣಿಗೆ ಸಮರ್ಥವಾಗಿಮಾಡಿದೆ. ಯುಗದ ಕವಿಯಾಗಿರುವ-ಕುವೆಂಪು ಅವರ ಮಹಾ ಛಂದಸ್ಸಿನ 'ಶ್ರೀ ರಾಮಾಯಣದರ್ಶನಂ' ರಚನೆಯಲ್ಲಿ ಅವರು ಮಾಡಿದ ಕಾವ್ಯತಪದ ಮಹಿಮೆಯನ್ನು ಅಂಬಿಕಾತನಯದತ್ತರು ಗುರುತಿಸಿರುವಂತೆ ಜಗದ ಕವಿಯಾಗಿರುವ "ಅಂಬಿಕಾತನಯದತ್ತರ ಸಾಹಿತ್ಯ ಆಚಂದ್ರಾರ್ಕವಾಗಿ ಬೆಳಗುವಂತೆ ಮಾಡುವುದು ನಮ್ಮೆಲ್ಲರ ಕರ್ತವ್ಯ" ಎಂಬ ಸಂದೇಶದಿಂದ ಕನ್ನಡಿಗರನ್ನು ಕುವೆಂಪು ಎಚ್ಚರಿಸಿದ್ದಾರೆ. ಈ ಎಚ್ಚರಿಕೆಯಿಂದ

ಎಚ್ಚರಾಗಿರುವ ಕೃಷ್ಣಪ್ಪನವರು ಕುವೆಂಪು ಅವರ ಸಂದೇಶವನ್ನು ಪಾಲಿಸುವಲ್ಲಿ ಸ್ತುತ್ಯ ಹೆಜ್ಜೆಗಳನ್ನು ಹಾಕುತ್ತಿರುವುದು ಅತ್ಯಂತ ಗಮನಾರ್ಹವಾದ ಹಾಗೂ ಅನುಕರಣೀಯವಾದ ಪಥವಾಗಿದೆ. ಈ ಪಥದ ಪರಂಪರೆ ನಿರ್ಮಾಣಗೊಂಡು ಸಾಹಿತಿಗಳಲ್ಲಿಯ ಭಿನ್ನತೆಯನ್ನು ಪ್ರಮುಖ ಮಾಡದೆ, ಅವರಲ್ಲಿಯ ಐಕ್ಯದ, ಸಂಗಮ ಸ್ಥಾನಗಳ ದರ್ಶನ ಮಾಡಿಸುವ ಹೊಸ ವಿಮರ್ಶೆ ಕನ್ನಡದಲ್ಲಿ ಸ್ಥಿರವಾಗಬೇಕಾಗಿದೆ. ಅಂಥ ಮಾರ್ಗಕ್ಕೆ ಈ ಕೃತಿರಚನೆಯಿಂದ, ಕೃಷ್ಣಪ್ಪನವರು ನಾಂದಿಹಾಡಿದ್ದಾರೆ. ಈ ದೃಷ್ಟಿ ದಾರಿದೀಪವಾಗಲಿ ಎಂದು ಹಾರೈಸುತ್ತೇನೆ.

ಶ್ರೀ ನಾರಾಯಣ ಧೂಳಖೇಡ ಅವರ ಸ್ಮರಣೆಯ ಉಲ್ಲೇಖದಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ. ಇಂಥ ಅನುಭವ ಕರ್ನಾಟಕದ ಅನೇಕ ಊರುಗಳಲ್ಲಿ ಆದದ್ದು ನಾನೂ ಕೇಳಿದ್ದೇನೆ, ನೋಡಿದ್ದೇನೆ. ಅಂಬಿಕಾತನಯದತ್ತರ "ಗಂಗಾವತರಣ"ದಲ್ಲಿ ಆ ಸಾಮರ್ಥ್ಯ ಇರುವುದು ಅವರ ವರಕವಿತ್ವದ, ಅಮರಕವಿತ್ವದ ಜೀವಂತ ಸೆಲೆ. 'ಗ್ರಾಯತ್ರೀಸೂಕ್ತ'ದಲ್ಲಿ ಅಂಬಿಕಾತನಯದತ್ತರು– "ಹಾಡಿದವನ ಕಾಪಾಡಲೆಂದು ಕೈ ಹತ್ತುಎತ್ತಿದಾಕೆ!" ಎಂಬುದಾಗಿ ಪ್ರಾರ್ಥಿಸಿದ್ದಾರೆ. ಆ ಗಾಯತ್ರಿದೇವಿ–ಬೇಂದ್ರೆ ಭಾವಗೀತಗಳನ್ನು ಸತತವಾಗಿ ಗುಣುಗುಣಿಸುವ ಪ್ರಿಯ ಕೃಷ್ಣಪ್ಪ ಅವರ ತಾಯಿ ಸಾವಿತ್ರಮ್ಮ, ಪತ್ನಿ– ಶ್ರೀಮತಿ ಜಿ.ಸರೋಜಮ್ಮ; ಮುದ್ದುಮಕ್ಕಳಾದ ಚಿ. ತೃಪ್ತಿ, ಶಾಂತಲಾ, ಶ್ರೀಗಂಗ; ಸೋದರಳಿಯ ಚಿ. ಕೆ.ಎಸ್. ಸುಭಾಷ್‌ಚಂದ್ರ ಹಾಗೂ ಕೃಷ್ಣಪ್ಪ ನವರ ಆಪ್ತೇಷ್ಟಪರಿವಾರವನ್ನು–ಕಾಪಾಡಲಿ ಆಶೀರ್ವದಿಸಲಿ, ಆಯುಷ್ಯ, ಆರೋಗ್ಯ, ಭಾಗ್ಯಗಳನ್ನು ದಯಪಾಲಿಸಲಿ ಎಂಬುದೇ ನನ್ನ ಹಾರೈಕೆ.

ಕೃಷ್ಣಪ್ಪನವರ ಬೇಂದ್ರೆ ಭಕ್ತಿ ಭರದಿಂದ ಬೆಳೆಯಲಿ, ಅವರಿಂದ ಬೇಂದ್ರೆ ಸಾಹಿತ್ಯ ಕುರಿತು ವಿಸ್ತೃತ ಗ್ರಂಥರಚನೆ, ಬೇಂದ್ರೆ ನುಡಿಮುತ್ತು ಸಂಗ್ರಹ ಹಾಗೂ ಇನ್ನಿತರ ಸಾಹಿತ್ಯ ರಚನೆ ಸುಗ್ಗಿಯನ್ನು ಕಾಣಲಿ.

**ವಾಮನಬೇಂದ್ರೆ**
ಸಂಚಾಲಕರು
ಅಂಬಿಕಾತನಯದತ್ತ ವೇದಿಕೆ

ಧಾರವಾಡ
೬–೧೨–೧೯೯೫

# ಅರಿಕೆ

ನಾನು ಬೆಂಗಳೂರಿನ ಕಾರ್ಪೊರೇಷನ್ ಪ್ರೌಢಶಾಲೆಯ ವಿದ್ಯಾರ್ಥಿಯಾಗಿದ್ದಾಗ ನನ್ನ ಕನ್ನಡಮೇಷ್ಟರಾದ ದಿ. ಶ್ರೀ ಜೀ.ಶಂ. ಪರಮಶಿವಯ್ಯ ಮತ್ತು ಶ್ರೀ ಕೋಣಂದೂರು ಲಿಂಗಪ್ಪ ಅವರು ಕನ್ನಡಭಾಷೆಯ ಬನಿಯ ಸವಿಯನ್ನುಣಿಸಿದರು. ಆಗ ಬೇಂದ್ರೆಯವರ 'ಕುಣಿಯೋಣು ಬಾರ' ಕವನ ಓದಿ ಕುಣಿದೆ. ಬೇಂದ್ರೆ ಕಾವ್ಯದ ಗುಂಗಿನಲ್ಲಿ ಬೇಂದ್ರೆ ಕವನಗಳನ್ನು ಓದುತ್ತಾ ಹೋದಂತೆ;

ಬಡತನದ ಬಲಿಯಾಗ ಕರುಳಿನ ಕೊಲಿಯಾಗ
ಬಾಳ್ವಿಯ ಒಲಿಮ್ಯಾಗ
ಸುಟ್ಟು ಹಪ್ಪಳದ್ಹಾಂಗ ಸೊರಗಿದಿ ಸೊಪ್ಹಾಂಗ
ಬಂತಂತ ಮುಪ್ಪುಬ್ಯಾಗ !

ಎಂಬ ನುಡಿ ನಾವು ಬಡತನದಲ್ಲಿ ಬಾಳಿನ ಒಲೆಯ ಮೇಲೆ ಸುಟ್ಟ ಹಪ್ಪಳದ ಹಾಗೆ ಸೊರಗುತ್ತಿರುವುದನ್ನು, ನಮ್ಮ ನೋವನ್ನೂ ಬೇಂದ್ರೆ ಆತ್ಮೀಯರಾಗಿ ನುಡಿಯುತ್ತಿದ್ದಾರೆ ಎನ್ನಿಸಿತು. ಬೇಂದ್ರೆ ಕಾವ್ಯ ಆಪ್ತವಾಯಿತು. ಬಡತನದ ದಿನಗಳಲ್ಲಿ ನನ್ನ ತಾಯಿಯನ್ನು ಕೇಳಿ ಹಣ ಪಡೆದು, ಬೇಂದ್ರೆ ಕವನ ಸಂಕಲನಗಳನ್ನು ಕೊಂಡು ಓದಿದೆ, ನನ್ನ ತಂದೆತಾಯಿಗೆ ಓದಿಹೇಳಿದೆ; ಸಂತಸಪಟ್ಟೆ. ನಾನು ಬೆಳೆದಂತೆ ಬೇಂದ್ರೆ ಕಾವ್ಯವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದೆ. ಸತತ ಅಭ್ಯಾಸದಿಂದ ನನ್ನ ಮಿತಿಗೆ ತಕ್ಕಂತೆ ನನ್ನದಾಗಿಸಿಕೊಳ್ಳಲು ಪ್ರಯತ್ನ ನಡೆಸಿದೆ.

ನಾನು ನನ್ನ ಸರ್ಕಾರಿ ಉದ್ಯೋಗದಲ್ಲಿ ವರ್ಗಾವಣೆಯಾಗಿ ಹೊಸಹೊಸ ಊರಿಗೆ ಹೋದಾಗ ಬೇಂದ್ರೆ ಅಭಿಮಾನಿಗಳನ್ನು ಕಂಡು ಪ್ರೌಢಶಾಲೆಯಲ್ಲಿ, ಕಾಲೇಜುಗಳಲ್ಲಿ ಆ ವಿದ್ಯಾರ್ಥಿಗಳಿಗೆ ಬೇಂದ್ರೆ ಕವನ ಗಾಯನ, ವಾಚನಸ್ಪರ್ಧೆ ಏರ್ಪಡಿಸುವ ಹವ್ಯಾಸ ಬೆಳೆಸಿಕೊಂಡೆ. ಆ ಮಕ್ಕಳಿಗೆ ಬೇಂದ್ರೆ ಕೃತಿಗಳನ್ನು ಬಹುಮಾನವಾಗಿ ನೀಡಿ; ಬೇಂದ್ರೆ ಕಾವ್ಯ ಕುರಿತು ಮಾತಾಡತೊಡಗಿದೆ. ಕವಿಪುತ್ರ ಸಹೃದಯಿ ಡಾ॥ ವಾಮನ ಬೇಂದ್ರೆಯವರನ್ನು ಕಂಡು ನನ್ನ ಬೇಂದ್ರೆ ಸಾಹಿತ್ಯ ಪ್ರಚಾರ ಮತ್ತು ಪ್ರಸಾರದ ಅಭಿಲಾಷೆಯನ್ನು ತಿಳಿಸಿದೆ. ಅವರಾಗಲಿ ಪ್ರೊ॥ ಕೆ.ಎಸ್. ಶರ್ಮಾ, ಶ್ರೀ ಪಾಂಡುರಂಗ ಬೇಂದ್ರೆ, ಶ್ರೀಮತಿ ಪದ್ಮಾವತಿ ಪಾಂಡುರಂಗ ಬೇಂದ್ರೆ ಮತ್ತು ಶ್ರೀಮತಿ ವಿಶಾಖಾವಾಮನ ಬೇಂದ್ರೆ ಅವರಾಗಲಿ ನನ್ನನ್ನು ಬೆನ್ನುತಟ್ಟಿ ಪ್ರೋತ್ಸಾಹಿಸಿದರು. ನಾನು ಕರೆದ ಊರುಗಳ ಪ್ರೌಢಶಾಲೆಗಳಿಗೆ ಬಂದು ಮಕ್ಕಳಿಗೆ ಬೇಂದ್ರೆಯವರನ್ನು, ಬೇಂದ್ರೆ ಕಾವ್ಯವನ್ನು ಕುರಿತು ತಿಳಿಹೇಳಿದರು.

ಅಂತರರಾಷ್ಟ್ರೀಯ ಖ್ಯಾತಿಯ ಇಂಗ್ಲಿಷ್ ಪ್ರಾಧ್ಯಾಪಕ ಪ್ರೊ॥ ಸಿ.ಡಿ. ನರಸಿಂಹಯ್ಯ, ಪ್ರೊ॥ ಸಿ.ಪಿ.ಕೆ, ಪ್ರೊ॥ ಜಿ.ಎಚ್. ನಾಯಕ, ಪ್ರೊ॥ ಕೆ.ಅನಂತರಾಮು, ಪ್ರೊ॥ ಕೆ.ಭೈರವಮೂರ್ತಿ, ಪ್ರೊ॥ ಪ್ರಧಾನಗುರುದತ್, ಪ್ರೊ॥ ಜಿ.ಟಿ. ನಾರಾಯಣ ರಾವ್, ಕವಿ ದೊಡ್ಡ ರಂಗೇಗೌಡ, ಡಾ॥ ಎಚ್.ಎಸ್. ಹರಿಶಂಕರ್, ಡಾ॥ ಬಿ. ಬಿ. ರಾಜಪುರೋಹಿತ, ಶ್ರೀ ಕ್ಯಾತನಹಳ್ಳಿ ರಾಮಣ್ಣ, ಪ್ರೊ॥ ಶಿವರಾಮು ಕಾಡನಕುಪ್ಪೆ, ಡಾ॥ ಕೆ.ವೈ. ಶಿವಕುಮಾರ್, ಶ್ರೀ ಪಿ.ಎಂ. ವೆಂಕಟೇಶಯ್ಯ, ಪ್ರೊ॥ ಕೆ.ರಾಮಕೃಷ್ಣ ಉಡುಪ ಅವರು ಬೇಂದ್ರೆ ಕಾವ್ಯವನ್ನು ನಾನು ಚೆನ್ನಾಗಿ ತಿಳಿಯಲು ಮಾರ್ಗದರ್ಶನಮಾಡಿದರು. ಗೋಕಾಕದ ಶ್ರೀ ಲಿಂಗಣ್ಣ ಸಣ್ಣಕ್ಕಿ, ಬೆಳಗಾವಿಯ ಶ್ರೀ ಬಿ. ಸುಭಾಷ್‌ಚೌಗಲೆ, ಬಂಗಾರಪೇಟೆ ತಾ॥ ದೊಡ್ಡ ಪೊನ್ನಾಂಡಳ್ಳಿಯ ಸರ್ಕಾರಿ ಪ್ರೌಢಶಾಲೆಯ ಮುಖ್ಯೋಪಾಧ್ಯಾಯ ಶ್ರೀ ಎಂ. ಬೆಳ್ಳಾರಪ್ಪ, ಕೆ.ಜಿ.ಎಫ್. ಪ್ರಥಮದರ್ಜೆ ಕಾಲೇಜಿನ ಪ್ರಾಣಿಶಾಸ್ತ್ರದ ಹಿರಿಯ ಉಪನ್ಯಾಸಕರಾಗಿದ್ದ ಗಾಯಕ ದಿ. ಬಿ.ಎಂ. ಆಂಜನೇಯರೆಡ್ಡಿ, ಕನ್ನಡ ತೆಲುಗುಭಾಷೆಯ ಶ್ರೇಷ್ಠ ನಟರಾದ ಶ್ರೀ ನಂಗಲಿ ಎಂ. ಸ್ವಸ್ತಿಕ್ ಶಿವಾನಂದಂ, ಬಿ.ಇ.ಎಂ.ಎಲ್. ನಗರದ ಮಹಿಳಾ ಸಮಾಜದ ಶ್ರೀಮತಿ ಸರಿತಾ ಜ್ಞಾನಾನಂದ,

ಮೈಸೂರು ತಾ॥ ಜಯಪುರದ ಶ್ರೀ ರಾಘವೇಂದ್ರ ವಿದ್ಯಾ ಪೀಠ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರೂ, 'ಬೇಂದ್ರೆ ವೇದಿಕೆ'ಯ ಅಧ್ಯಕ್ಷರೂ ಆದ ಶ್ರೀ ಎಸ್. ಸುಧೀಂದ್ರ, ಪಾಂಶುಪಾಲರು ಶ್ರೀ ರಾಮಕೃಷ್ಣ ವಿದ್ಯಾಶಾಲಾ, ಮೈಸೂರು, ಪ್ರಾಂಶುಪಾಲರು, ಸರ್ಕಾರಿ ಪದವಿಪೂರ್ವ ಕಾಲೇಜು, ಕಾಮುಸಮುದ್ರ; ಪ್ರಾಚಾರ್ಯರು, ವಿಶ್ವವಿದ್ಯಾನಿಲಯ ಸಂಜೆ ಕಾಲೇಜು, ಮೈಸೂರು; ಬೆಂಗಳೂರು 'ಉದಯಭಾನು ಕಲಾಸಂಘ'ದ ಶ್ರೀ ಎಂ. ನರಸಿಂಹ, ಬೆಂಗಳೂರು ಮತ್ತೀಕೆರೆಯಲ್ಲಿರುವ 'ಸಂಗಮ ಸಾಂಸ್ಕೃತಿಕ ಕೇಂದ್ರ'ದ ಶ್ರೀ ಸಮೀಉಲ್ಲಾಖಾನ್ ಮತ್ತು ಶ್ರೀ ಶೆ.ಬೊ. ರಾಧಾಕೃಷ್ಣ, ಸಿ.ಎಫ್.ಟಿ.ಆರ್.ಐ.ನ 'ಕನ್ನಡ ಸಹೃದಯ ಬಳಗ'ದ ಶ್ರೀ ರಂಗಧಾಮಯ್ಯ, ದೇವನಹಳ್ಳಿ ತಾ॥ ಕಾರಹಳ್ಳಿಯ 'ಸಹೃದಯ ಗೆಳೆಯರ ಬಳಗ'ದ ಶ್ರೀ ಜಿ. ಮುನೇಗೌಡ, ಚಿಕ್ಕಮಗಳೂರು ಗಡಿಕಲ್ ಹಿರೇಕೊಡಿಗೆಯ ಲಾಲ್‌ಬಹದ್ದೂರ್‌ಶಾಸ್ತ್ರಿ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರೂ ಅಲ್ಲಿನ 'ಅಂಬಿಕಾತನಯದತ್ತ ವೇದಿಕೆ'ಯ ಸಂಚಾಲಕರೂ ಆದ ಶ್ರೀ ಸೌಕೂರು ಸುಬ್ರಹ್ಮಣ್ಯ ಅಡಿಗ, ಮೈಸೂರಿನ 'ಜ್ಞಾನದರ್ಶಿನಿ ಮಹಿಳಾ ಸಮಾಜ'ದ ಶ್ರೀಮತಿ ಟಿ.ವಿ.ಅನ್ನಪೂರ್ಣಮ್ಮ, ಚಿಲ್ಡ್ರನ್ ಲಿಟರರಿ ಕ್ಲಬ್‌ನ ಡಾ॥ ಆರ್. ಪೂರ್ಣಿಮಾ, ಗುಂಡ್ಲುಪೇಟೆಯ ಶ್ರೀಮತಿ ಕೆ.ಎಸ್. ನಾಗರತ್ನಮ್ಮ ಬಾಲಿಕಾ ಪ್ರೌಢಶಾಲೆಯ ಗೌರವ ಕಾರ್ಯದರ್ಶಿ ಶ್ರೀ ಸ.ರಾ. ಶಿವಲಿಂಗಯ್ಯ, ಗಾಯಕ ದಂಪತಿಗಳಾದ ಶ್ರೀಮತಿ ಮತ್ತು ಶ್ರೀ ಸುದರ್ಶನ್ 'ಭಾರತೀಯ', ಮಂಡ್ಯಜಿಲ್ಲೆ ಭಾರತೀನಗರದ ಪ್ರಥಮ ದರ್ಜೆ ಕಾಲೇಜಿನ ಕನ್ನಡ ಉಪನ್ಯಾಸಕರಾದ ಶ್ರೀ ಎಂ. ರಾಮಕೃಷ್ಣ ಮುಂತಾದವರು ಬೇಂದ್ರೆ ಕಾವ್ಯದ ಆರಾಧಕರಾಗಿ ಬೇಂದ್ರೆ ಕಾವ್ಯವು ವಿದ್ಯಾರ್ಥಿಗಳಲ್ಲಿ, ಜನಮನದಲ್ಲಿ ಉಳಿಯುವ ಕಾರ್ಯಕ್ರಮದಲ್ಲಿ ಪಾಲುಗೊಂಡು ನನ್ನ ಹವ್ಯಾಸಕ್ಕೆ ಇಂಬುಕೊಟ್ಟರು. ಅವರೆಲ್ಲರಿಗೂ ಇತರ ನೂರಾರು ಬೇಂದ್ರೆ ಅಭಿಮಾನಿಗಳಿಗೂ ವಂದಿಸುವೆ.

ನಾನು ಮೈಸೂರಿಗೆ ವರ್ಗವಾಗಿ ಬಂದಾಗ, ನನ್ನ ಆದರಣೀಯ ಗುರುಗಳೂ ಕನ್ನಡದ ವಿದ್ವಾಂಸರೂ ಆದ ಡಾ॥ ಕೆ. ಅನಂತರಾಮು ಅವರು ನನ್ನ ಎಲ್ಲ ಬಗೆಯ ಬೇಂದ್ರೆ ಹವ್ಯಾಸಕ್ಕೆ ಆಶೀರ್ವಾದ ಮಾಡಿ ಪ್ರೋತ್ಸಾಹಿಸಿದರು.

ಅದರ ಫಲವಾಗಿ ನಾನು ಮೈಸೂರಿನಲ್ಲಿ ಹೆಚ್ಚು ಬೇಂದ್ರೆ ಕಾರ್ಯಕ್ರಮ ನಡೆಸಲು ಸಾಧ್ಯವಾಯಿತು; ಅವರ ಮಾರ್ಗದರ್ಶನದಿಂದ ಬೇಂದ್ರೆ ಶತಮಾನೋತ್ಸವದ ಸುಸಂದರ್ಭದಲ್ಲಿ 'ಹಾಡುಹಕ್ಕಿ ಅಂಬಿಕಾತನಯದತ್ತ' ಕೃತಿಯನ್ನು ರಚಿಸಲು ಸಾಧ್ಯವಾಯಿತು. ಒಬ್ಬ ಬೇಂದ್ರೆ ಕಾವ್ಯಾಭಿಮಾನಿಯಾಗಿ ಸಹೃದಯ ಸಂಪ್ರದಾಯದಂತೆ ಆ ಕಾವ್ಯ ರಹಸ್ಯವನ್ನು ಅರಿಯಲು ನಾನು ಇಲ್ಲಿ ಪ್ರಯತ್ನಿಸಿದ್ದೇನೆ.

ನಾನು ಬೇಂದ್ರೆ ಕಾವ್ಯ ಅಭ್ಯಾಸ ಮಾಡುವಾಗ ಬೇಂದ್ರೆಯವರು ಕನ್ನಡ ಆಡುನುಡಿಗೆ ಜೀವತುಂಬಿ ನೂತನ ರೂಪಕಗಳನ್ನು ಸೃಷ್ಟಿಸಿರುವುದನ್ನು ಕಂಡು ಆಶ್ಚರ್ಯಪಟ್ಟಿದ್ದೇನೆ. 'ನನ್ನ ಮಾನಸದ ಮದಗವೆ' ಎಂಬಲ್ಲಿ; ತಾಯಿ ತನ್ನ ಮಗುವನ್ನು 'ಕೆರೆ ತುಂಬಿ ಹರಿದು ಹೊರ ಚೆಲ್ಲಿದ ತೂಬಿನ ನೀರು' ಎಂದು 'ಮದಗ'ವಾಗಿಸಿರುವುದು ಎಂತಹ ಅದ್ಭುತರೂಪಕ ಎನಿಸಿತು! ಜೋಗಿ ಕವನದ 'ಪಾಡು ಆಗತಾವ ಹಾಡು ಆಗುತಾವ ಅದರ ಲಯಕೆ ತೂಗಿ' ಎಂಬ ಸಾಲಿನ 'ಪಾಡು' ಪದ ಇಡೀ ಕವನದಲ್ಲಿರುವ ಅನುಭಾವವನ್ನು ಅಭಿವ್ಯಕ್ತಿಸುತ್ತಿದೆ ಎಂಬುದು ಮನವರಿಕೆಯಾಯಿತು. ಆತ್ಮವು ಮಾವಿನಂತೆ ಪಕ್ವವಾಗುವುದನ್ನು 'ಪಾಡು' ಧ್ವನಿಸುತ್ತದೆ. 'ಸಣ್ಣ ಸೋಮವಾರ' ಕವನದಲ್ಲಿ ಬೇಂದ್ರೆ ಯವರು ಗ್ರಾಮ್ಯಪದವಾದ 'ಸೆಜ್ಜೆ'ಗೆ ವಿಶೇಷ ಅರ್ಥವ್ಯಾಪ್ತಿ ನೀಡಿದ್ದಾರೆ. ಸಣ್ಣ ಹೊಳೆಯಾದ ಶಾಲ್ಮಲಿಯು ಗಂಗಾವಳಿಯಾಗಿ, ಸಾಗರದಂತೆ ವಿಶಾಲವಾಗಿ ಹರಿದು, 'ಸಾಗರ ಬಿದ್ದು ಸಾಗರಕ್ಕಾಗಿ' ಗೋಕರ್ಣದ ಕಡೆ ಹೊರಟಂತೆ; ಆತ್ಮ 'ಸೆಜ್ಜೆ' ಬೆಳೆಯ ಕಿರುಹಂತವನ್ನು ಮೀರಿ ಬೂರಲದೀಪಮಾಲೆಯಾಗಿ ಪರಮಾತ್ಮನ ಕಡೆ ಹೊರಟ ಭವ್ಯರೂಪಕವನ್ನು ಅಲ್ಲಿ ನೀಡಿದ್ದಾರೆ. 'ನಿರಾಭರಣ ಸುಂದರಿ' ಕಥೆ, ಜೈನ ಸಂಪ್ರದಾಯದ ಒಂದು ಪಂಗಡದವರು ಮಲ್ಲಿನಾಥನನ್ನು ಹೆಣ್ಣು ಎಂದು ಕರೆದ ಭಾವವೇ ಕಥಾರೂಪವಾಗಿ, ಚಿತ್ರವಾಗಿ ರೂಪುಗೊಂಡು 'ನಿರಾಭರಣ ಸುಂದರಿ'ಯಾಗಿದೆ ಎಂಬ ಅಭಿಪ್ರಾಯಕ್ಕೆ ಬಂದಿದ್ದೇನೆ.

ಹೀಗೆ ಬೇಂದ್ರೆ ಕಾವ್ಯ ತಿಳಿಯಲು ಪ್ರಯತ್ನ ನಡೆಸಿದ ಫಲ 'ಹಾಡುಹಕ್ಕಿ ಅಂಬಿಕಾತನಯದತ್ತ' ಕೃತಿಯಾಗಿದೆ. ಈ ಕೃತಿಯನ್ನು ರಚಿಸುವಾಗ ಡಾ॥ ವಾಮನಬೇಂದ್ರೆಯವರು ಪ್ರತಿ ಹಂತದಲ್ಲಿ ಅತಿಶಯವಾದ

ಮಾರ್ಗದರ್ಶನ ವನ್ನು, ಬೇಂದ್ರೆ ಯವರ ಅಪರೂಪದ ಭಾವಚಿತ್ರಗಳನ್ನು ನೀಡಿದ್ದಾರೆ. ಎಲ್ಲಕ್ಕಿಂತ ಹೆಚ್ಚಿನ ಸಂಗತಿಯೆಂದರೆ ಈ ಕೃತಿಗೊಂದು ಹೃತ್ಪೂರ್ವಕವಾದ ಮುನ್ನುಡಿಯನ್ನು ಬರೆದುಕೊಟ್ಟು ನನ್ನನ್ನು ಹರಸಿದ್ದಾರೆ. ಅವರಿಗೆ ನನ್ನ ವಿಶೇಷ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದೇನೆ. ನನ್ನ ಆಲೋಚನೆಗೆ ಸರಿಹಾದಿ ತೋರಿಸಿದ ಗುರುಗಳಾದ ಪ್ರೊ॥ ಕೆ. ಅನಂತರಾಮು ಅವರಿಗೆ ವಂದಿಸುತ್ತಾ ಈ ಕೃತಿಯನ್ನು ಅವರಿಗೆ ಸಮರ್ಪಿಸಿದ್ದೇನೆ. ಇದನ್ನವರು ಪ್ರೀತಿಯಿಂದ ಸ್ವೀಕರಿಸಿ ನನ್ನನ್ನು ಆಶೀರ್ವದಿಸಬೇಕೆಂದು ಬೇಡುತ್ತೇನೆ. ನಮ್ಮ ಮೋಟಾರು ವಾಹನ ಇಲಾಖೆಯ ಎಲ್ಲ ಅಧಿಕಾರಿಗಳಿಗೆ ಮತ್ತು ಸಹೋದ್ಯೋಗಿಗಳಿಗೆ; ಶ್ರೀರಂಗ ಪ್ರಕಾಶನದ ಶ್ರೀಮತಿ ಮತ್ತು ಶ್ರೀ ರಂಗಧಾಮಯ್ಯ ಅವರಿಗೆ ಮತ್ತು ಅಂದವಾಗಿ ಸಕಾಲಕ್ಕೆ ಮುದ್ರಿಸಿಕೊಟ್ಟ 'ಚೈತ್ರ ಪ್ರಿಂಟರ್ಸ್'ನ ಗೆಳೆಯರುಗಳಾದ ಶ್ರೀ ಗೋ. ಉಮಾಶಂಕರ್, ಮ. ಉಮಾಪತಿ, ಮ. ಕಿರಣ್ ಕುಮಾರ್, ಶಿ. ಕುಮಾರ್, ಪು. ಬಸವಣ್ಣ ಸ್ವಾಮಿಯವರಿಗೆ ವಂದಿಸುತ್ತೇನೆ. ಈ ನಾಡಿನ ಶಾಲಾಕಾಲೇಜುಗಳ ವಿದ್ಯಾರ್ಥಿಸಮುದಾಯಕ್ಕೆ, ಕನ್ನಡನಾಡಿನ ಸಹೃದಯ ಬಳಗಕ್ಕೆ ನನ್ನ ನಮಸ್ಕಾರಗಳನ್ನು ಅರ್ಪಿಸುತ್ತೇನೆ. ಸಂಸ್ಕೃತಿಪ್ರೇಮಿಗಳಾದ ಕನ್ನಡಿಗರೆಲ್ಲರೂ ನನ್ನ ಈ ಕೃತಿಯುನ್ನು ಪ್ರೀತಿಯಿಂದ ಕೈಗೆತ್ತಿಕೊಂಡು ನನ್ನನ್ನು ಪ್ರೋತ್ಸಾಹಿಸಬೇಕೆಂದು ಪ್ರಾರ್ಥಿಸುತ್ತೇನೆ.

ಮೈಸೂರು

**ಡಾ॥ ಜಿ. ಕೃಷ್ಣಪ್ಪ**

೧೨-೧೨-೧೯೯೫

# ಕೃತಜ್ಞತೆಗಳು

'ಹಾಡುಹಕ್ಕಿ ಅಂಬಿಕಾತನಯದತ್ತ' ಕೃತಿಯನ್ನು ಮೊದಲ ಆವೃತ್ತಿಯಾಗಿ ಪ್ರಕಟಿಸಿದ ಮೈಸೂರಿನ ಶ್ರೀರಂಗ ಪ್ರಕಾಶನದ ಶ್ರೀಮತಿ ಮತ್ತು ಶ್ರೀ ರಂಗಧಾಮಯ್ಯನವರಿಗೆ ನಮನಗಳು. ಈ ಕೃತಿಯನ್ನು ರಚಿಸಲು ಮಾರ್ಗದರ್ಶನ ಮಾಡಿದ ಗುರು ಡಾ॥ ಕೆ. ಅನಂತರಾಮು ಅವರನ್ನು; ಮುನ್ನುಡಿ ಬರೆದು ಪ್ರೋತ್ಸಾಹಿಸಿ, ಅಪರೂಪದ ಬೇಂದ್ರೆ ಫೋಟೋಗಳನ್ನು ಈ ಪುಸ್ತಕದಲ್ಲಿ ಉಪಯೋಗಿಸಿಕೊಳ್ಳಲು ಅನುಮತಿ ನೀಡಿದ ಡಾ॥ ವಾಮನ ಬೇಂದ್ರೆಯವರನ್ನು ಸದಾ ನೆನೆಯುತ್ತೇನೆ. ಈ ಕೃತಿಯನ್ನು ಆದರದಿಂದ ಓದಿ ಸಂತೋಷಪಟ್ಟ ಎಲ್ಲ ಕನ್ನಡ ಬಂಧುಗಳಿಗೆ ನನ್ನ ಪ್ರಣಾಮಗಳು. ಇದರ ಎರಡನೆಯ ಆವೃತ್ತಿಯನ್ನು ಪ್ರಕಾಶಿಸುತ್ತಿರುವ ಕಾಮಧೇನು ಪುಸ್ತಕ ಭವನದ ಪ್ರೊ॥ ಡಿ.ಕೆ. ಶ್ಯಾಮಸುಂದರರಾವ್ ಅವರಿಗೆ ಮತ್ತು ಅಂದವಾಗಿ ಮುದ್ರಿಸಿದ ಪರಿಶ್ರೀ ಪ್ರಿಂಟರ್ಸ್‌ನ ಶ್ರೀ ಆರ್. ಶ್ರೀನಾಥ್ ಮತ್ತು ಸಿಬ್ಬಂದಿಗೆ ನನ್ನ ವಂದನೆಗಳು.

**ಡಾ॥ ಜಿ. ಕೃಷ್ಣಪ್ಪ**

೧೬-೧೨-೨೦೦೮
ಬೆಂಗಳೂರು

# ಪ್ರಕಾಶಕರ ಮಾತು

ಡಾ॥ ಜಿ. ಕೃಷ್ಣಪ್ಪನವರು ರಚಿಸಿರುವ 'ಹಾಡುಹಕ್ಕಿ ಅಂಬಿಕಾತನಯದತ್ತ' ಕೃತಿಯ ಮೊದಲ ಭಾಗದಲ್ಲಿ ಬೇಂದ್ರೆಯವರ ಜೀವನ ವೃತ್ತಾಂತದ ಸ್ಥೂಲ ಚಿತ್ರಣವಿದೆ. ಬೇಂದ್ರೆಯವರ ಸಮಗ್ರ ಸಾಹಿತ್ಯ ಸೃಷ್ಟಿಯನ್ನು ವಿಶ್ಲೇಷಿಸುವ ಈ ಕೃತಿಯ 'ಸಾಹಿತ್ಯಸಿದ್ಧಿ:ಕಾವ್ಯ' ಎಂಬ ವಿಭಾಗದಲ್ಲಿ ಒಂಭತ್ತು ಒಳ ವಿಭಾಗಗಳಿವೆ. ಗರಿ, ಎಂಟು ಎದೆಯ ಬಂಟ ಬಡವ, ಮಕ್ಕಳ ಬೇಂದ್ರೆ, ಮಾತೃ ಪ್ರಜ್ಞೆ, ಶ್ರಾವಣ, ಪ್ರೇಮಗೀತೆಗಳು, ಒಲುಮೆಯ ಕಿಚ್ಚು, ವ್ಯಕ್ತಿ ವಿಶಿಷ್ಟ ಕವನಗಳು, ಅನುಭಾವ ಗೀತೆಗಳು ಎಂದು ಬೇಂದ್ರೆಯವರ ಕಾವ್ಯರಾಶಿಯನ್ನು ವಿಂಗಡಿಸಿಕೊಂಡಿರುವುದರಲ್ಲಿಯೆ ಲೇಖಕರ ವಿಮರ್ಶಾದೃಷ್ಟಿ ಗೋಚರವಾಗುತ್ತದೆ. ಈ ಕೃತಿಯಲ್ಲಿನ ವಿಮರ್ಶೆಯು ಎಲ್ಲ ಸಹೃದಯರಿಗೆ ಸುಲಭವಾಗಿ ಅರ್ಥವಾಗುವಂತಿದೆ ಹಾಗೂ ಆಳವಾದ ಒಳನೋಟಗಳಿಂದ ಕೂಡಿದುದಾಗಿದೆ. ಕೃತಿಯ ವಿವಿಧ ವಿಭಾಗಗಳಾದ ನಾಟಕಗಳು, ಸಾಹಿತ್ಯ ವಿಮರ್ಶೆ ಮತ್ತು ಸಣ್ಣ ಕತೆಗಳು, ಭಾಗಗಳಲ್ಲಿ ಈ ಸಾಹಿತ್ಯ ಪ್ರಕಾರಗಳಲ್ಲಿ ಬೇಂದ್ರೆಯವರು ರಚಿಸಿರುವ ಕೃತಿಗಳ ಪರಾಮರ್ಶೆಯಿದೆ. ಬೇಂದ್ರೆಯವರ ಕೆಲವು ಅಪರೂಪದ ಛಾಯಾಚಿತ್ರಗಳಿರುವುದು ಈ ಕೃತಿಯ ಇನ್ನೊಂದು ವಿಶೇಷ. ಸಾಹಿತ್ಯಾಸಕ್ತರೂ, ಬೇಂದ್ರೆ ಅಭಿಮಾನಿಗಳೂ ಅತ್ಯಗತ್ಯವಾಗಿ ಓದಲೇಬೇಕಾದ ಪುಸ್ತಕ 'ಹಾಡುಹಕ್ಕಿ ಅಂಬಿಕಾತನಯದತ್ತ'.

ಬೇಂದ್ರೆ ಶತಮಾನೋತ್ಸವ ವರ್ಷ (೧೯೯೬)ದಲ್ಲಿ ಮೊದಲ ಬಾರಿಗೆ ಪ್ರಕಟವಾಗಿದ್ದ ಈ ಕೃತಿಯು, ಕಾಮಧೇನು ಪುಸ್ತಕ ಭವನದಿಂದ ಇದೀಗ ಎರಡನೆಯ ಮುದ್ರಣ ಕಾಣುತ್ತಿದೆ. ಈ ಸುಯೋಗವನ್ನು ನಮ್ಮ ಪ್ರಕಾಶನಕ್ಕೆ ನೀಡಿದ ಡಾ॥ ಜಿ. ಕೃಷ್ಣಪ್ಪನವರಿಗೆ ಪ್ರಕಾಶನವು ಆಭಾರಿಯಾಗಿದೆ.

**ಕಾಮಧೇನು ಪುಸ್ತಕ ಭವನ**

೧೬-೧೨-೨೦೦೯
ಬೆಂಗಳೂರು

# ಪರಿವಿಡಿ



* * *



೧೯೧೯–ಬೇಂದ್ರೆಯವರ ವಿವಾಹ ಸಂದರ್ಭದ ಚಿತ್ರ
ದ.ರಾ. ಬೇಂದ್ರೆ ಮತ್ತು ಶ್ರೀಮತಿ ಲಕ್ಷ್ಮೀಬಾಯಿ ಬೇಂದ್ರೆ



ಮಾಸ್ತಿಯವರೊಡನೆ ಬೇಂದ್ರೆ



೧೯೨೫ರ ಸುಮಾರಿನ ದ.ರಾ. ಬೇಂದ್ರೆ–ಬಿಂ.ಎಂ.ಶ್ರೀ ಅವರೊಂದಿಗೆ



೧೯೬೦-೬೨ರ ಸುಮಾರಿನಲ್ಲಿ ಬೇಂದ್ರೆ ಅವರು
ಗೋಕರ್ಣದ ಸಮುದ್ರದ ತೀರದಲ್ಲಿ



ಎಡದಿಂದ ಬಲಕ್ಕೆ - ನಿಂತವರು ೧) ಪಾಂಡುರಂಗಬೇಂದ್ರೆ
೨) ಬೇಂದ್ರೆಯವರ ತಮ್ಮನ ಮಗಳು-ವಿದ್ಯಾಪೇಢರಕರ ಮೊಮ್ಮಗಳು ವೈಶಾಲಿ
೩) ವಾಮನಬೇಂದ್ರೆ.
ಕುಳಿತವರು-೧) ಸೌ॥ ಪದ್ಮಾವತಿಬೇಂದ್ರೆ (ಹಿರಿಯ ಸೊಸೆ) ೨) ದ.ರಾ. ಬೇಂದ್ರೆ
೩) ಬೇಂದ್ರೆಯವರ ತಮ್ಮ-ಕೃಷ್ಣಬೇಂದ್ರೆ ೪) ದಿ. ವಿಶಾಖಾಬೇಂದ್ರೆ (ಕಿರಿಯ ಸೊಸೆ)
ಕುಳಿತವರು ಬೇಂದ್ರೆಯವರ ಮೊಮ್ಮಕ್ಕಳು-೧)ವಿಕ್ರಮಪೇಂಢರಕರ
೨) ಪ್ರಭಾಕರಬೇಂದ್ರೆ ೩) ಪ್ರತಿಮಾಬೇಂದ್ರೆ ೪) ಪುನರ್ವಸುಬೇಂದ್ರೆ



ಡಾ. ಪ್ರಭಾಕರಕುಲಕರ್ಣಿ ಮತ್ತು ಸೌ. ಮಂಗಳಕುಲಕರ್ಣಿ
(ಬೇಂದ್ರೆಯವರ ಮಗಳು ಮತ್ತು ಅಳಿಯ)

# ಹಾಡುಹಕ್ಕಿ ಅಂಬಿಕಾತನಯದತ್ತ

## ಜೀವನ ಪರಿಚಯ

'ಅಂಬಿಕಾತನಯದತ್ತ' ಎಂಬುದು ದತ್ತಾತ್ರೇಯ ರಾಮಚಂದ್ರ ಬೇಂದ್ರೆ ಎಂಬ ಪೂರ್ಣನಾಮದ ಕವಿವರ್ಯರ ಕಾವ್ಯನಾಮವಾಗಿದ್ದು ನಮಗೆ ಬೇಂದ್ರೆ ಎಂಬ ಎರಡೇಅಕ್ಷರದಿಂದ ಆತ್ಮೀಯರಾಗಿದ್ದಾರೆ. ಅವರು ಧಾರವಾಡದ ಪೋತನೀಸ ಓಣಿಯ ಗುಣಾರಿಯವರ ಮನೆಯಲ್ಲಿ ೧೮೯೬ ಜನವರಿ ೩೧ರಂದು ಜನಿಸಿದರು. ಅವರ ತಾಯಿ ಅಂಬವ್ವ (ಅಂಬಿಕೆ), ತಂದೆ ರಾಮಚಂದ್ರ ಬೇಂದ್ರೆ. ಅವರು ವೇದಪಾರಂಗತ ಚಿತ್ಪಾವನ ಬ್ರಾಹ್ಮಣರು. ಅವರ ಮೂಲ ರತ್ನಾಗಿರಿ ಜಿಲ್ಲೆಯಲ್ಲಿ ಕೇಳಸಿ ಎಂಬ ಗ್ರಾಮ. ಅವರ ಮಾತೃಭಾಷೆ ಮರಾಠಿ. ಅಲ್ಲಿನ ಅನಾನುಕೂಲ ಪರಿಸ್ಥಿತಿಯಿಂದ ಅವರ ಮನೆತನ ತ್ರ್ಯಂಬಕೇಶ್ವರಕ್ಕೆ ಬಂದು ಗಣಪತಿಯ ಉಪಾಸನೆ ಕೈಗೊಂಡಿತು. ಆ ಕುಟುಂಬದ ಹಿರಿಯರಿಗೆ 'ನೀವು ಕರ್ನಾಟಕಕ್ಕೆ ವಲಸೆ ಹೋದುದಾದರೆ, ಅಲ್ಲಿ ನಿಮ್ಮ ಮನೆತನಕ್ಕೆ ಉಜ್ವಲ ಭವಿಷ್ಯ ಕಾದಿದೆ', ಎಂಬ ಸ್ವಪ್ನ ದೃಷ್ಟಾಂತವಾಗಲು, ಅದನ್ನು ನಂಬಿ ಅವರು ತಾಸಗಾಂವಕ್ಕೆ ಬಂದರು. ಅನಂತರ ಆ ಮನೆತನದ ರಾಮಭಟ್ಟಬೇಂದ್ರೆ ಎಂಬುವರು ಶಿರಹಟ್ಟಿಯ ಲಾಗೂಮನೆತನದ ಪುರೋಹಿತರಾಗಿ ಶಿರಹಟ್ಟಿಗೆ ಬಂದರು. ರಾಮಭಟ್ಟರು ದಶಗ್ರಂಥಿಗಳು, ವೇದಪಾರಂಗತರು, ಉಪಾಸಕರೂ ಆಗಿದ್ದರು. ಉಪಾಸನಾ ಮಾರ್ಗದಲ್ಲಿದ್ದ ಅವರು ಸಂಸಾರ ತೊರೆದು ಸನ್ಯಾಸ ಸ್ವೀಕರಿಸಿದರು. ಅವರ ಸಮಾಧಿ ಶಿರಹಟ್ಟಿಯಲ್ಲಿದೆ. ರಾಮಭಟ್ಟರ ಮಗ ಅಪ್ಪಾಭಟ್ಟ. ಅಪ್ಪಾಭಟ್ಟರಿಗೆ ರಾಮಚಂದ್ರಪಂತಬೇಂದ್ರೆ ಮತ್ತು ಬಂಡೋಪಂತಬೇಂದ್ರೆ ಎಂಬ ಇಬ್ಬರು

ಮಕ್ಕಳು. ರಾಮಚಂದ್ರಬೇಂದ್ರೆಯವರು ವೇದಾಧ್ಯಯನ ಮಾಡುತ್ತ ವೈದಿಕವೃತ್ತಿ ನಡೆಸುತ್ತಿದ್ದರು. ತಮ್ಮ ಬಂಡೋಪಂತಬೇಂದ್ರೆ ಮ್ಯಾಟ್ರಿಕ್ ಪರೀಕ್ಷೆ ಪಾಸಾಗಿ ನೌಕರಿ ಹಿಡಿದು ಪುಣೆಯಲ್ಲಿ ವಾಸವಾದರು. ರಾಮಚಂದ್ರ ಬೇಂದ್ರೆಯವರಿಗೆ ನಾಲ್ಕು ಮಕ್ಕಳಾಗಿ ಉಳಿದವರು ಇಬ್ಬರು. ಅವರಲ್ಲಿ ಹಿರಿಯಮಗ ನಮ್ಮ ವರಕವಿ ದತ್ತಾತ್ರೇಯಬೇಂದ್ರೆ ಇನ್ನೊಬ್ಬರು ಕೃಷ್ಣಾಜಿಬೇಂದ್ರೆ.

ಬೇಂದ್ರೆಯವರು ತಮ್ಮ 'ಬೇಂದ್ರೆ' ಎಂಬ ಹೆಸರಿನ ಮೂಲದ ಬಗ್ಗೆ "ಬೇಂದ್ರೆ ಅಂದರೆ ನಾವು ಕೊಂಕಣದಿಂದ ಬಂದಿದ್ದೇವೆ. ವೇದ ಹೇಳುವವರು 'ವೇದ್ರೆ' ಆದರು. ಬರುಬರುತ್ತ ವೇದ್ರೆ, ವೇಂದ್ರೆ ಆದರು. ಆಮೇಲೆ ವೇಂದ್ರೆ ಬೇಂದ್ರೆ ಆದರು"[೧] ಎಂದು ಹೇಳಿಕೊಂಡಿದ್ದಾರೆ. ಅವರು ಜನಿಸಿದ್ದು ಅವರ ತಾಯಿಯ ತಾಯಿ ಗೋದೂಬಾಯಿಯವರ ಒಲವಿನ ಮನೆಯಲ್ಲಿ. ಬಡತನದ ಬಾಳು ಸಾಗಿಸಲು ಖಾನಾವಳಿ ನಡೆಸುತ್ತಿದ್ದ ಗಟ್ಟಿಜೀವ ಅಜ್ಜಿಯ ಮಮತೆಯಲ್ಲಿಯೇ ಅವರು ಬೆಳೆದರು. "ನನ್ನ ತಾಯಿಯ ತಾಯಿ ಗೋದೂಬಾಯಿ ಒಳ್ಳೆಯ ಧೈರ್ಯದ ಹೆಣ್ಣುಮಗಳು. ಆಕೆಯ ತವರುಮನೆ ನರಗುಂದರ ದೀಕ್ಷಿತರದು. ಆಕೆಯ ಜೀವನದ ಕಷ್ಟದ ಕಥೆ ನೆನೆಸಿದಂತೆಲ್ಲ ಆಕೆ ಮಹಾತಪಸ್ವಿನಿ ಎಂದೇ ಭಾಸವಾಗುವುದು"[೨] ಎಂದು ಬೇಂದ್ರೆ ನುಡಿದಿದ್ದಾರೆ. ಅವರ ತಾಯಿ ಅಂಬಕ್ಕ ಹುಟ್ಟಿದ್ದು ಧಾರವಾಡದ ಸಮೀಪದಲ್ಲಿರುವ ತಲವಾಯಿ ಎಂಬ ಹಳ್ಳಿಯಲ್ಲಿ. ಅಂಬಕ್ಕ ಬ್ರಹ್ಮಚೈತನ್ಯ ಮಹಾರಾಜರ ಭಕ್ತೆ. ಅವರು ಪತಿಯೊಡನೆ ಗೋಂದಾವಲೆ ಯಾತ್ರೆಮಾಡಿ ಮಹಾರಾಜರ ಪ್ರತ್ಯಕ್ಷದರ್ಶನಾಶೀರ್ವಾದ ಪಡೆದು ರಾಮೋಪಾಸನೆ ಮಾಡುತ್ತಿದ್ದರು.

**ಧಾರವಾಡದ ಪರಿಸರ :** ಬೇಂದ್ರೆಯವರು ಧಾರವಾಡದ ಜಾನಪದದ ಪರಿಸರದಲ್ಲಿ ಹುಟ್ಟಿ ಬೆಳೆದು, ಅದರ ದನಿಗೆ ಮೈಮನಕೊಟ್ಟು, ಅದರ ಸಹಜ ನಾದದಲ್ಲಿ ಬೆಳೆಯುತ್ತ, ಅದರ ಸೊಗಡನ್ನು ತಮ್ಮ ಶಿಷ್ಟ ಕಾವ್ಯದಲ್ಲಿ ತಂದ ಜಾನಪದ ಗಾರುಡಿಗರು. ಆ ಜಾನಪದ ಧಾಟಿ ಅವರ ನುಡಿಯ ಭಾವವಾದುದರ ಬಗ್ಗೆ ಅವರೇ ಹೇಳಿರುವುದು ಹೀಗೆ : "ಕನ್ನಡ ಜಾನಪದ ಪ್ರವೇಶವೂ ಆವೇಶವೂ ಎಂದು ನನ್ನಲ್ಲಿ ಗೂಡು ಮಾಡಿಕೊಂಡಿತೊ ನಾನು

ಹೇಳಲಾರೆ. ತಾಯಿ, ಅಜ್ಜಿ ಬೀಸುವಾಗ ಹೇಳುವ ಪದಗಳಿಂದ, ಬೆಳಗು ಜಾವದಲ್ಲಿ ನನಗೆ ಎಚ್ಚರಿಕೆಗಿಂತ ನಿದ್ದೆ ಹೆಚ್ಚು. ಏನು ಆ ಅವಸ್ಥೆಯಲ್ಲಿಯೇ ಪರಿಣಾಮ ಹೆಚ್ಚೋ ? ದಾಸರ ಗೋವಿಂದಪ್ಪ ಮೃದು ತಾಳ ಭಜನೆಯೊಡನೆ 'ಗರುಡಾssನೇರಿ ಬರುವಾsssl ಇವನ್ಯಾರಮ್ಮಯ್ಯಾs ॥' ಎಂದೊ, 'ಜಯ ಪಾಂಡುರಂಗss ಏನು ಮಾಡಿದೀ ಮಾನಭಂಗಾ॥' ಎಂದೊ ರಾಗ ಎಳೆದಾಗ ನನಗೆ ಚುಕ್ಕು ಬಡೆದು ಮಲಗಿಸಿದಂತಾಗುತ್ತಿತ್ತು. 'ನಿಂಬಿಯ ಮರಹುಟ್ಟಿ ನಿಂಗಕ್ಕೆ ನೆರಳಾಗಿ ಬಂದ ಜಂಗಮಕ್ಕs ಬಸವಯ್ಯಾಸೂವಿ ॥' ಎಂದು ಬಾಲಬಸವರ ಹಾಡು ಕಿವಿಗೆ ಬೀಳುತ್ತಲೇ ನಮ್ಮ ಕಾಲು ಕೇಳದೆ ಕಿತ್ತಿ ಅವರಿದ್ದಲ್ಲಿಗೆ ಹೋಗಿ ಅವರ ಸಾಕ್ಷಾತ್ಕಾರವಾದಾಗ ಈ ಕಣ್ಣಿಗೆ ತೃಪ್ತಿ. ಗೊಲ್ಲರು, ಕವಲೆತ್ತಿನವರು, ದುರ್ಗಮುರ್ಗಿಗಳು – ಎಂಥ 'ತಾನಾತಂದಾನಾ' ಇದ್ದರೂ ಕಿವಿಗೆ ಔತಣ ವೆನಿಸುತ್ತಿತ್ತು".[೩]

ಬೇಂದ್ರೆಯವರು ಧಾರವಾಡದ ನೆಲದ ಒಬ್ಬ ಸಹಜ ಬಾಲಕನಾಗಿ ಕುತೂಹಲದಿಂದ ಎಲ್ಲವನ್ನು ನೋಡುತ್ತ ತನ್ನ ಓರಗೆಯ ಹುಡುಗರೊಡನೆ ಆಡುತ್ತ, ಸುತ್ತಮುತ್ತಲ ಜನಜೀವನವನ್ನು ಗಮನಿಸುತ್ತ, ಅದರ ಎಲ್ಲ ಒಳ ಹೊರಭಾವದ ಬದುಕನ್ನು ತನ್ನದಾಗಿಸಿಕೊಳ್ಳುತ್ತ ಬೆಳೆದವರು. ಅವರ ಬಾಲ್ಯದ ಆಸಕ್ತಿ ಕುರಿತು ವಾಮನ ಬೇಂದ್ರೆ ಯವರು "ಶಾಲೆಗೆ ಒಯ್ಯುವ ಪಾಟೀಗಂಟಿನಲ್ಲಿ ಪುಸ್ತಕದ ಜೊತೆಗೆ ಚಾವಂಗ, ಕುಂಟ್ಬಲಪಿ, ಬುದ್ಧಿಬಳ, ಗಂಜೀಪು, ಹುಲಿಹಳ್ಳು ಮೊದಲಾದ ಆಟದ ಸಾಮಾನು ಹೆಚ್ಚಾಗಿರಬೇಕು. ಶಾಲೆಗೆ ಹೋಗುವ ಹಾದಿಯಲ್ಲಿ ಮಂಗಾಟ, ಕರಡಿಕುಣಿತ, ಕೌಲೆತ್ತು, ಕಸರತ್ತು ನಡೆದಿದ್ದರೆ ಅದನ್ನು ನೋಡುವುದರಲ್ಲಿ ಬೇಂದ್ರೆಯುವರ ಮನಸ್ಸು ಮೈಮರೆಯುತ್ತಿತ್ತು. ಶಾಲೆಬಿಡುವ ಹೊತ್ತಿಗೆ ಶಾಲೆಯಕಡೆಗೆ ಬೇಂದ್ರೆಯವರ ಸವಾರಿ ಹೊರಟಿದ್ದನ್ನು ಅವರ ಬಾಲ್ಯ ಸ್ನೇಹಿತರು ಚೇಷ್ಟೆಮಾಡುತ್ತಿದ್ದರು. ಶಾಲೆಯ ಓದಿಗಿಂತ ತನ್ನ ಸುತ್ತಮುತ್ತಲಿನ ಜೀವನ–ನಿರೀಕ್ಷಣೆಯಲ್ಲಿ ಬೇಂದ್ರೆಯವರ ಮನಸ್ಸು ತೊಡಗಿರುತ್ತಿತ್ತಂತೆ"[೪] ಎಂದು ವರ್ಣಿಸಿದ್ದಾರೆ.

ಅಜ್ಜಿ ಮತ್ತು ತಾಯಿಯವರು ದೈವಭಕ್ತರು. ಅವರು ಮನೆಯಲ್ಲಿ ಮಾಡುತ್ತಿದ್ದ ಚಿದಂಬರಭಜನೆ ಮತ್ತು ರಾಮಭಜನೆಗಳು ಬೇಂದ್ರೆಯವರನ್ನು

ಭಕ್ತಿಪಥದತ್ತ ಕೊಂಡೊಯ್ಯುವ ದೀವಿಗೆಗಳಾದವು. ತಾಯಿ ಮತ್ತು ಅಜ್ಜಿಯವರಿಗೆ ಬ್ರಹ್ಮಚೈತನ್ಯರ ಚರಿತ್ರೆ, ಅಕ್ಕಲಕೋಟೆ ಮಹಾರಾಜರ ಚರಿತ್ರೆ, ಶಿವಲೀಲಾಮೃತ, ಜ್ಞಾನಸಿಂಧು, ಹರಿವಿಜಯ, ಪಾಂಡವಪ್ರತಾಪ ಮುಂತಾದ ಮರಾಠಿ ಗ್ರಂಥಗಳನ್ನು ಓದಿಹೇಳುತ್ತಿದ್ದರು. ಆ ಓದಿನ ಪ್ರಭಾವ ಅವರನ್ನು ಮಾತೃ ಆರಾಧಕರನ್ನಾಗಿ ಮಾಡಿತು.

**ಭಾರತ ಪುಸ್ತಕಾಲಯ :** ಆ ರೀತಿಯ ಮನೆಯ ಪರಿಸರದೊಂದಿಗೆ ಅವರಿಗೆ ಪುಸ್ತಕಗಳನ್ನೋದುವ ಆಸಕ್ತಿ ಉಂಟಾಯಿತು. ೧೯೧೨ರಲ್ಲಿ ಧಾರವಾಡದ ಕಾಮನಕಟ್ಟೆಯಲ್ಲಿದ್ದ ಶ್ರೇಷ್ಠವಾಚನಾಲಯವಾದ 'ಭಾರತ ಪುಸ್ತಕಾಲಯ'ದ ಎಲ್ಲ ಪುಸ್ತಕಗಳನ್ನು ಓದಿ, ತನ್ಮೂಲಕ ಓದುವ ಹವ್ಯಾಸ ಜೀವನದ ಭಾಗವಾಗುವಂತೆ ಬೆಳೆದರು. ಅವರು ಚಿಕ್ಕಂದಿನಲ್ಲಿ ಬೆಳೆದ ಕಾಮನಕಟ್ಟೆಯಲ್ಲಿ ಅವರು ಕಂಡ ಬದುಕು, ನೋಡಿದ ಉತ್ಸವಗಳು, ಮೆರವಣಿಗೆಗಳು, ಅಂತ್ಯಯಾತ್ರೆಗಳು ಹಾಗೂ ಕಾಲಕ್ಕೆ ತಕ್ಕಂತೆ ಆಡಿದ ಆಟ ಅವರ ಕಾವ್ಯದ ಭಾಗವಾಗಿ ಹರಡಿಕೊಳ್ಳುವಷ್ಟು ಪ್ರಭಾವ ಬೀರಿತು. ಅವರು ಹನ್ನೆರಡು ವರ್ಷದವರಿದ್ದಾಗ ಅವರ ತಂದೆ ಗಂಡಮಾಲೆಯ ರೋಗದಿಂದ ೧೯೦೭ರಲ್ಲಿ ತೀರಿಕೊಂಡರು. ಆಗ ಅಜ್ಜಿ ಬೇಂದ್ರೆಯವರನ್ನು, ಅವರಿಬ್ಬರು ತಮ್ಮಂದಿರನ್ನು ಓದಿಬೆಳೆಸುವ ಹೊಣೆಹೊತ್ತು ಸಾಕಿದರು. ಅಜ್ಜಿ ಮತ್ತು ತಾಯಿಯ ತುಂಬುಮಮತೆ ಹಾಗೂ ಅವರು ಬದುಕುಸಾಗಿಸಲು ನಡೆಸುತ್ತಿದ್ದ ಹೋರಾಟ ಬೇಂದ್ರೆಯವರನ್ನು ಮಾತೃಭಕ್ತರನ್ನಾಗಿ ಮಾಡಿತು.

**ಕಾಲೇಜು ಶಿಕ್ಷಣ :** ಬೇಂದ್ರೆಯವರು ಚಿಕ್ಕಂದಿನಿಂದಲೂ ಕಷ್ಟದಜೀವನ ಸಾಗಿಸುತ್ತಿದ್ದಂತೆ, ಅವರನ್ನು ಇನ್ನೂ ಹೆಚ್ಚು ಪರೀಕ್ಷೆಗೆ ಒಳಪಡಿಸುವಂತೆ ವಿಧಿ ಅವರನ್ನು ಕಾಡುತ್ತಿತ್ತು. ಅವರು ಮ್ಯಾಟ್ರಿಕ್ ಪರೀಕ್ಷೆ ಮುಗಿಸಿಬಂದ ಸಂಜೆಯೇ ತಮ್ಮ ಕುಟುಂಬದ ಆಧಾರವಾಗಿದ್ದ ಅಜ್ಜಿಯನ್ನು ಕಳೆದುಕೊಂಡರು. ತಾಯಿ ಮತ್ತು ಮಕ್ಕಳು ದಿಕ್ಕುತಪ್ಪಿದಂತಾದರು. ಆದರೆ ದೈವದೊಡ್ಡದು. ಅವರ ಚಿಕ್ಕಪ್ಪ ಬಂಡೋಪಂತ ಬೇಂದ್ರೆ ಪುಣೆಯಲ್ಲಿ ಉತ್ತಮ ಕೆಲಸದಲ್ಲಿದ್ದರು. ಅವರು ವಿಶಾಲ ಹೃದಯಿಗಳು. ಬೇಂದ್ರೆ ಅಲ್ಲಿಗೆ ಹೋಗಿ ೧೯೧೪ರಿಂದ ೧೯೧೮ರವರೆಗೆ ಪುಣೆಯ ಫರ್ಗ್ಯುಸನ್ ಕಾಲೇಜಿನ ವಿದ್ಯಾರ್ಥಿಯಾಗಿ ಬಿ.ಎ.

ಕಲಿತರು. ಕಾಲೇಜು ವಿದ್ಯಾಭ್ಯಾಸದ ಅವಧಿಯಲ್ಲಿ ಪುಣೆಯ ಚಿಕ್ಕಪ್ಪನ ಮನೆಯಲ್ಲಿ ಮರಾಠಿ ವಾತಾವರಣವಿತ್ತು. ಅವರ ಚಿಕ್ಕಪ್ಪನವರು ಸಾಹಿತ್ಯ ಪ್ರಿಯರಾಗಿ 'ಮುರಲಿ' ಎಂಬ ಹಸ್ತ ಲಿಖಿತ ಮರಾಠೀ ಮಾಸಪತ್ರಿಕೆ ಹೊರಡಿಸುತ್ತಿದ್ದರು. ಅದಕ್ಕೆ ಬೇಂದ್ರೆಯವರು ಸಹಾಯಹಸ್ತ ನೀಡಿದರು. ಮರಾಠಿಯನ್ನು ಶಾಸ್ತ್ರೋಕ್ತವಾಗಿ ಕಲಿಯದ ಬೇಂದ್ರೆಯವರು ಆ ಭಾಷೆಯ ಪ್ರಭುತ್ವ ಪಡೆಯಲು ಅದು ಸಹಾಯವಾಯಿತು. ಕಾಲೇಜಿನ ವಿದ್ಯಾಭ್ಯಾಸದ ಅವಧಿಯಲ್ಲಿ ಜಾಣ ವಿದ್ಯಾರ್ಥಿಗಳು ಅವರ ಸ್ನೇಹ ಬಯಸುತ್ತಿದ್ದರು ಮತ್ತು ಅವರ ಶಿಕ್ಷಕರು ಅವರನ್ನು ಮೆಚ್ಚಿ ತಮ್ಮ ಅಂತರಂಗದ ವಿದ್ಯಾರ್ಥಿಯನ್ನಾಗಿ ಸ್ವೀಕರಿಸಿದರು.

ಬೇಂದ್ರೆಯವರ ಮನೆಮಾತು ಮರಾಠಿಯಾಗಿ ಮನದಮಾತು ಕನ್ನಡವಾದುದರಿಂದ ಹಾಗೂ ಅವರಿಗೆ ಎರಡೂಭಾಷೆಗಳ ಸಾಹಿತ್ಯದಮೇಲೆ ಪ್ರಭುತ್ವವಿದ್ದುದರಿಂದ ಸ್ನೇಹಿತರಜೊತೆ ಖಾಡೀಲಕರರ ನಾಟಕಗಳು, ಟಿಳಕರ ಗೀತಾರಹಸ್ಯ, ರವೀಂದ್ರಸಾಹಿತ್ಯ ಕುರಿತು ಚರ್ಚಿಸುತ್ತಿದ್ದರು. ಅಲ್ಲಿ ಬಾಬುರಾವ್ ಬಿಡೆ ಅವರ ಸಹವಾಸದಿಂದ ಹಿಂದೀಸಾಹಿತ್ಯ ಮತು ಜ್ಯೋತಿಷ್ಯಶಾಸ್ತ್ರದಲ್ಲಿ ಪರಿಣತರಾದರು. ಕಾಲೇಜು ವಿದ್ಯಾಭ್ಯಾಸದ ಅವಧಿಯಲ್ಲಿಯೇ ಕನ್ನಡದಲ್ಲಿ ಕವಿತೆಗಳನ್ನು ರಚಿಸುವುದರ ಜೊತೆಗೆ ಮರಾಠಿ, ಸಂಸ್ಕೃತ ಮತ್ತು ಇಂಗ್ಲಿಷಿನಲ್ಲಿ ಸಹ ಕವನಗಳನ್ನು ರಚಿಸುತ್ತಿದ್ದರು. ಅವರ ಕಂಠಶ್ರೀ ಅದ್ಭುತವಾದುದು. ಅದು ಅವರಿಗೆ ಅವರತಾಯಿಯಿಂದ ಬಂದ ಬಳುವಳಿಯಾಗಿತ್ತು. ಅವರ ಕವನ ವಾಚನಶೈಲಿ ಕೇಳುಗರನ್ನು ಕಾವ್ಯದ ಮೂಲಭಾವದತ್ತ ಸೆಳೆದೊಯ್ಯುತ್ತಿತ್ತು. ಆಗ ಮೊರೋಬಾದಾದಾ ವಾಡೆಯಲ್ಲಿದ್ದ ಕರ್ನಾಟಕ ಸಂಘದಲ್ಲಿ ಪ್ರಥಮವಾಗಿ ಬೇಂದ್ರೆಯವರು ಸ್ವರಚಿತ ಕವನಗಳನ್ನು ವಾಚಿಸಿದರು. ಅವರ ಕಾವ್ಯಗುಣದ ಅರಿವು ಅಲ್ಲಿಯವರಿಗಾಯಿತು.

**ಶಾರದಾಮಂಡಲ :** ಬೇಂದ್ರೆಯವರು ಪುಣೆಯಲ್ಲಿನ ಕಾಲೇಜು ವಿದ್ಯಾಭ್ಯಾಸದ ಅವಧಿಯಲ್ಲಿ 'ಶಾರದಾಮಂಡಲ' ಎಂಬ ಸ್ನೇಹಿತರ ಕೂಟ ನಿರ್ಮಿಸಿ ಸಾಹಿತ್ಯಾಧ್ಯಯನ ನಡೆಸಿದರು. ಚಿಕ್ಕಂದಿನಲ್ಲಿ ಕಂಠಪಾಠಮಾಡಿದ್ದ 'ಗಂಗಾ ಲಹರಿ', ಲಕ್ಷ್ಮೀಶನ ನಾದಮಾಧುರ್ಯ ಮತ್ತು ಸರ್ವಜ್ಞನ ಬಿಚ್ಚುನುಡಿಯ ಪ್ರಭಾವಕ್ಕೊಳಗಾಗಿದ್ದ ಬೇಂದ್ರೆಯವರು ಕಾಳಿದಾಸನ 'ಶಾಕುಂತಲ',

ಜಗನ್ನಾಥಪಂಡಿತನ 'ಗಂಗಾಲಹರಿ', ಶಂಕರಾಚಾರ್ಯರ 'ಸೌಂದರ್ಯಲಹರಿ', ಜ್ಞಾನೇಶ್ವರರ 'ಜ್ಞಾನೇಶ್ವರಿ' ಅಭ್ಯಾಸಮಾಡಿದರು. ಅದೇ ಅವಧಿಯಲ್ಲಿ ಶೇಕ್ಸ್‌ಪಿಯರ್, 'ಏ.ಈ.', ಖಲೀಲಗಿಬ್ರಾನ್, ಶೆಲ್ಲಿ, ಕೀಟ್ಸ್, ಎಮರ್ಸನ್, ಮಾರಿಸ್‌ಮೆಟರ್‌ಲಿಂಕ್, ರವೀಂದ್ರನಾಥಠಾಗೂರ್ ಮತ್ತು ಅರವಿಂದರು ರಚಿಸಿದ ಗ್ರಂಥಗಳನ್ನು ಅಭ್ಯಾಸಮಾಡಿದರು. ಕಾವ್ಯ, ನಾಟಕ, ಶಾಸ್ತ್ರ, ವಿಜ್ಞಾನ, ರಾಜಕಾರಣವನ್ನು ಆಳವಾಗಿ ಅಭ್ಯಾಸಮಾಡಿ ಸ್ನೇಹಿತರೊಡನೆ ಚರ್ಚಿಸಿ ವಿಷಯದ ನಿಖರತೆ, ಸ್ಪಷ್ಟಗೊಳಿಸಿಕೊಳ್ಳುವ ಹವ್ಯಾಸ ಬೆಳೆಸಿಕೊಂಡರು. ಈ ಚರ್ಚೆ, ನಿರರ್ಗಳ ಮಾತನಾಡುವ ಕಲೆ ಅವರ ಜೀವನದ ಒಂದು ಭಾಗವಾಯಿತು. ಅವರ ವಾಕ್‌ಶಕ್ತಿಯಲ್ಲಿ ಓಜಸ್ಸು, ತೇಜಸ್ಸು, ಮಂತ್ರಸಾಮರ್ಥ್ಯ ಅವತರಣವಾಗಿ ಅವರು ಕ್ರಮೇಣ ಜನಕ್ಕೆ ಕಾವ್ಯಾನಂದ ಹಂಚಿ ನುಡಿಜ್ಯೋತಿ ಬೆಳಗಿ ಜ್ಞಾನದಬೆಳಕು ಹಬ್ಬಿಸಿದರು. ಅವರ ಮಾತೆಲ್ಲ ಜ್ಯೋತಿಯಾಯಿತು. ಧಾರವಾಡದ ಕನ್ನಡದ ಕಂಪನ್ನು ಅವರು ಪುಣೆಯಲ್ಲಿ ಹಬ್ಬಿಸುತ್ತಿರುವುದು ಧಾರವಾಡದ ಹಿರಿಯರಿಗೆ ಹೆಮ್ಮೆ ಎನಿಸಿತು.

ಆ ಅವಧಿಯ ನಂತರ ಕವಿ 'ಅಂಬಿಕಾತನಯದತ್ತ'ನಾಗಿ ರೂಪುಗೊಂಡ ದತ್ತಾತ್ರೇಯ ಬೇಂದ್ರೆಯವರನ್ನು ಅವರದೇ ಮಾತಿನಲ್ಲಿ ತಿಳಿಯೋಣ. "೧೯೧೮ರಲ್ಲಿ ಬಿ.ಎ. ಪರೀಕ್ಷೆಕೊಟ್ಟು, ಧಾರವಾಡದಲ್ಲಿ ನಡೆಯುವ ೪ನೆಯ ಸಾಹಿತ್ಯ ಸಮ್ಮೇಲನಕ್ಕಾಗಿ–ಅದರ ನೆಪದಿಂದ ಎಂದರೂ ಸಲ್ಲಬಹುದು– ಬೇಸಿಗೆಯ ರಜೆ ಬೇರೆ, ಧಾರವಾಡಕ್ಕೆ ಬಂದು ಬಿಟ್ಟೆ. ಕಾಮನಕಟ್ಟೆಯ ಕೂಟಿಗಿದ್ದ ಗೋಖಲೆಯವರ ಮನೆ ನಮ್ಮ ತಾಯಿಗೆ ತವರುಮನೆಯಿದ್ದಂತೆ. ಗೋಖಲೆ ಚಿದಂಬರಬಾಯಿಯು, ನನ್ನ ತಾಯಿಯು ತಾಯಿ ಗೋದೂಬಾಯಿಯನ್ನು ಅಕ್ಕನಂತೆ ಗೌರವವಾಗಿ ನಡೆಸಿಕೊಳ್ಳುತ್ತಿದ್ದಳು. ಈಕೆ ಬಡವಿ, ಆಕೆ ಭಾಗ್ಯವತಿ. ಆದರೂ ಯಾವುದೋ ಹೃದಯಸಂಬಂಧ ಅವರನ್ನು ಕೂಡಿಸಿತ್ತು. ಈ ಗೋಖಲೆಯವರ ಮನೆಯಲ್ಲಿಯೇ ನನ್ನ ಪ್ರಾರಂಭದ ಕೆಲವು ಕನ್ನಡ ಕವಿತೆ ಬರೆದೆ. ವಿಶೇಷವಾಗಿ 'ಕೋಗಿಲೆ, ಕೋಗಿಲೆ, ಎಂದು ಬಂದೆನೀ' ಎಂಬ ನೀಳ್ಗವನ ಬರೆದದ್ದು ಇಲ್ಲಿಯೇ. ಅವರ ಮನೆಗೆ ಹತ್ತಿರದ ನವಲಿ ಅವರ ಹಿತ್ತಲಲ್ಲಿ ದೊಡ್ಡದೊಂದು ಹುಣಿಸೇಮರ;

ವರ್ಷವರ್ಷವೂ ಒಂದು ಕೋಗಿಲೆ ಅಲ್ಲಿ ತನ್ನ ಆಸ್ಥಾನ ನಡೆಸುತ್ತಿತ್ತು. 'ಕೋಗಿಲೆ', ಕವನಕ್ಕೆ ಅದು ನಿಮಿತ್ತ. ಈ ನೀಳ್ಗವನ, ಕೆಲವು ಬಿಡಿಗವನ, ಕೆಲವು ಭಾಷಾಂತರ, ಕೆಲವು ಪ್ರಾಯೋಗಿಕ ನುಡಿಗಳು, ಸಾಲುಗಳು, ಇಷ್ಟು ಬಂಡವಲಿನಿಂದ ನಾನು ಕವಿಯಾಗಿ ಬಿಟ್ಟಿದ್ದೆ. ನಾನು ಕವಿಯಾಗುವುದಿರಲಿ, ನನ್ನ ಸಮಕಾಲದ ಗೆಳೆಯರು–ವಯಸ್ಸಿನಿಂದ ಸ್ವಲ್ಪ ಹಿರಿಯರು ನನ್ನನ್ನು 'ನವ ಕರ್ನಾಟಕದ ಕವಿ' ಎಂದು ಹಿಗ್ಗಿಸಿದರು. ಡೆಕ್ಕನ್ ಕಾಲೇಜ ಕರ್ನಾಟಕ ಸಂಘದ ವಾರ್ಷಿಕ ಅತಿಥಿ ಎಂದು ನಾನು ಹೋಗಿದ್ದೆ. ಪೂನಾ ಕರ್ನಾಟಕ ಸೋಶಿಯಲ್ ಕ್ಲಬ್ಬಿನಲ್ಲಿ ನನ್ನ 'ತುತ್ತೂರಿ' ಓದಿದ್ದೆ, ಊದಿದ್ದೆ. 'ಕೋಗಿಲೆ' ಕವನ ಮೊದಲೊಮ್ಮೆ 'ಸ್ವಧರ್ಮ'ದಲ್ಲಿ ಮುದ್ರಿತವಾಗಿ ೧೯೫೯ರ ನನ್ನ 'ಸಂಚಯ'ದಲ್ಲಿಯೂ ಸಂಗ್ರಹಿತವಾಗಿದೆ. 'ತುತ್ತೂರಿ' ದಿವಗಂತ ಬಳವಂತರಾವ್ ಜಠಾರ ಅವರು ನನ್ನ ಪ್ರೋತ್ಸಾಹನ ನಿಮಿತ್ತದಿಂದ (ಅದೂ ಒಂದು ಕಾರಣ) ಹೊರಡಿಸಿದ 'ಪ್ರಭಾತ' ಎಂಬ ಕವಿತಾಮಾಸಿಕದಲ್ಲಿ ಪ್ರಕಾಶಿತವಾಯಿತು".[೫]

ಬೇಂದ್ರೆಯವರು ಬಿ.ಎ. ಪರೀಕ್ಷೆಯ ಫಲಿತಾಂಶ ತಿಳಿಯುವ ಮೊದಲೇ ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನ ಶಿಕ್ಷಕರಾದರು. ಶಿಕ್ಷಕರಾಗಿ ಜೀವನಕ್ಕೆ ಒಂದು ಆಧಾರ ದೊರಕಿದ ಕಾರಣ ಪುಣೆಗೆ ಹೋಗಿ ತಾಯಿಯನ್ನು ಕರೆದುಕೊಂಡುಬಂದು ಧಾರವಾಡದ ... ಸಕಟ್ಟೆಯಲ್ಲಿ ಮತ್ತೆ ಮನೆಮಾಡಿದರು. ವಿಕ್ಟೋರಿಯ ಹೈಸ್ಕೂಲಿನಲ್ಲಿ ಮೂರುವರ್ಷ, ಅನಂತರ ರಾಷ್ಟ್ರೀಯ ಶಾಲೆಯಲ್ಲಿ ಮೂರುವರ್ಷ ದುಡಿದರು.

**ತುತೂರಿ–ಎಚ್ಚರ :** ಬೇಂದ್ರೆ ಯವರ ಪ್ರಥಮ ಪ್ರಕಟಿತಕವನಗಳು 'ತುತೂರಿ' ಮತ್ತು 'ಸರಸ್ವತಿ'. ಅವು 'ಪ್ರಭಾತ' ಪತ್ರಿಕೆಯ ೧೯೧೮ ಆಗಸ್ಟ್‌ನ ಪ್ರಥಮ ಸಂಚಿಕೆಯಲ್ಲಿ 'ಅಂಬಿಕಾತನಯದತ್ತ' ಕಾವ್ಯನಾಮದಲ್ಲಿ ಪ್ರಕಟವಾದವು. 'ತುತೂರಿ'ಯಲ್ಲಿ ಕಾವ್ಯ ಮೊಳಗಿಸುವ ಧ್ವನಿ, ನಾಡುನುಡಿಯ ಅಭಿಮಾನ, ನಾಡಿಗರನ್ನು ಎಚ್ಚರಿಸುವನುಡಿಗಳಿವೆ. ಅದು ಕನ್ನಡಿಗರ ಮಂಗಲನಾದವಾಗಿ ಹೊಮ್ಮಿದೆ. ಆ ಕವಿತೆಯ ರಚನೆಯನ್ನು ಕುರಿತು ಕವನದ ಪ್ರಾರಂಭದಲ್ಲಿ ಬೇಂದ್ರೆಯವರು "ಈ ಕವಿತೆಯನ್ನು ಮಹಾರಾಷ್ಟ್ರಕವಿ ಕೇಶವಸುತ ಇವರ

‘ತುತಾರಿ’ಯ ಹೆಸರನ್ನು ಕೇಳಿಬರೆದೆನೇ ಹೊರತು ಅದನ್ನು ನಾನು ಓದಿಲ್ಲ” ಎಂದು ತಿಳಿಸಿದ್ದಾರೆ.

**ವಿವಾಹ :** ಬೇಂದ್ರೆಯವರು, ತಾಯಿಯು ಒಪ್ಪಿದ ನರಗುಂದದ ಜೋಗಳೇಕರವಾಸುದೇವರಾಯರ ಮಗಳು ರಂಗೂಬಾಯಿಯನ್ನು ೧೯೧೯ರಲ್ಲಿ ಹುಬ್ಬಳ್ಳಿಯಲ್ಲಿ ವಿವಾಹವಾದರು. ರಂಗೂಬಾಯಿಯವರು ಅಯ್ಯನವರ ಶಾಲೆಯಲ್ಲಿ ಮಾತ್ರ ಓದಿದವರು. ಅವರು ಯುವಕವಿ ಬೇಂದ್ರೆಯವರನ್ನು ಕೈ ಹಿಡಿದು ಅವರ ಕಾವ್ಯರಚನೆಗೆ ಸ್ಫೂರ್ತಿಯಾದರು. ಅವರು ಮಹಾರಾಷ್ಟ್ರೀಯರ ಸಂಪ್ರದಾಯದಂತೆ ಪತಿಯ ಮನೆಯಲ್ಲಿ ಲಕ್ಷ್ಮೀಬಾಯಿ ಎಂಬ ಹೊಸ ಹೆಸರಿನಿಂದ ಕರೆಯಲ್ಪಟ್ಟರು. ಲಕ್ಷ್ಮೀಬಾಯಿಯವರು ‘ಸಖೀಗೀತ’ದ ನಾಯಕಿಯಾಗಿ ಬೇಂದ್ರೆಯವರ ‘ನನಗೂ ನಿನಗೂ ಅಂಟಿದ ನಂಟಿನ ಕೊನೆಬಲ್ಲವರಾರು ಕಾಮಾಕ್ಷಿಯೇ !’ ಎಂಬ ತಾತ್ವಿಕ ಚಿಂತನೆಗೆ ಕಾರಣರಾದರು.

ಶಾಲಾ ಶಿಕ್ಷಕರಾದ ಬೇಂದ್ರೆಯವರು ಬಡತನದಲ್ಲಿಯೇ ಜೀವನ ಸಾಗಿಸುತ್ತಿದ್ದರು. ಅವರ ಎಲ್ಲ ಆದರ್ಶ ಬದುಕಿಗೆ ನೆರವಾಗಿ, ಸಾಹಿತ್ಯಾಸಕ್ತಿಗೆ ಇಂಬುಗೊಟ್ಟು ಸಂಸಾರನಡೆಸಿದ ಶ್ರೇಯಸ್ಸು ಲಕ್ಷ್ಮೀಬಾಯಿಯವರದಾಗಿದೆ. ಬೇಂದ್ರೆಯವರಿಗೆ ಕಾವ್ಯದ ಸಿರಿತನದಲ್ಲಿ ಬದುಕಿನ ಬಡತನ ಸಿರಿತನವೆಂಬುದು ಅಷ್ಟು ಮುಖ್ಯವಾಗಿರಲಿಲ್ಲ. “ಶಿಕ್ಷಕರ ಬಡಸಂಸಾರ ನಿರ್ವಿಘ್ನವಾಗಿ ಸಾಗಿತು. ಬಡಸಂಸಾರ ಎಂಬ ಭಾವನೆಯೇ ಬೇಂದ್ರೆಯವರಿಗೆ ಬರಲಿಲ್ಲ. ಏಕೆಂದರೆ ಶ್ರೀಮಂತತನ ಅವರಿಗೆ ಬೇಕಾಗಿರಲಿಲ್ಲ. ಊಟಕ್ಕೆ ಇರದಿದ್ದರೆ ಉಪವಾಸ ಮಾಡಿದರೇನು ತಪ್ಪು, ಉಪವಾಸವ್ರತವನ್ನೂ ಸಾಧಿಸಿದಂತೆ ಆಯಿತು ಎಂಬುದೇ ಅವರ ಜೀವನ ದೃಷ್ಟಿ”[೬] ಎಂದು ವಾಮನಬೇಂದ್ರೆಯವರು ವಿವರಿಸಿದ್ದಾರೆ.

ಬೇಂದ್ರೆಯವರು ಶಿಕ್ಷಕರಾಗಿ ಮಕ್ಕಳಿಗೆ ಸಮರ್ಥವಾಗಿ ಕಲಿಸಿದರು. ಕವಿಭಾವದ ಬೇಂದ್ರೆಯವರು ಮೈತುಂಬಿ ಮನದುಂಬಿ ಪಾಠಕಲಿಸಿ ಬೇಂದ್ರೆ ಮಾಸ್ತರರಾದರು. ವಿದ್ಯಾರ್ಥಿಮಿತ್ರರೊಡನೆ ಸುಂದರಕಾಂಡ, ವಾಯುಸ್ತುತಿ ಸೌಂದರ್ಯಲಹರಿ, ವಿಷ್ಣುಸಹಸ್ರನಾಮ, ಲಲಿತಾಸಹಸ್ರನಾಮ ಪಠಣ ಮಾಡುತ್ತ

ಸ್ನೇಹಸಾಧನೆ ಮಾಡಿದರು. ಆದರ್ಶ ಶಿಕ್ಷಕರಾದ ಬೇಂದ್ರೆಯವರು ತಮ್ಮ ಅಭ್ಯಾಸದ ಫಲವನ್ನು ವಿದ್ಯಾರ್ಥಿಗಳಿಗೆ ಉಣಬಡಿಸಿದರು. ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಸಕ್ತಿ ಉಂಟಾಗಲು ಕೈಬರಹದ ಪತ್ರಿಕೆ ನಡೆಸಿದರು.

ಬೇಂದ್ರೆಯವರ ದಾಂಪತ್ಯದ ಫಲವಾದ ಮಕ್ಕಳ ಹುಟ್ಟು-ಸಾವು, ಬದುಕಿನ ಏಳುಬೀಳಿನ ಬವಣೆಯಲ್ಲಿ ಅವರು ಹಾಡಿದ ಹಾಡು ಎಲ್ಲ ಕನ್ನಡಿಗರ ಮನದ ಹಾಡಾಗಿ ಉಳಿದಿವೆ. ಅವರ ಮೊದಲ ಮಗ ಕ್ಷೇಮೇಂದ್ರ ಹುಟ್ಟಿದ ವರ್ಷವೇ ತೀರಿಕೊಂಡ. ಎರಡನೇ ಮಗ ರಾಮ ಬೆಳೆದು ಮನಸ್ಸಿಗೆ ಮುದ ನೀಡುತ್ತ ಸಂಸಾರದ ಹೊಣೆಹೊರಲು ಸಿದ್ಧನಾದ ಹಾಗೂ ಬೇಂದ್ರೆಯವರ ಹಾಗೆ ಸಾಹಿತ್ಯಾಸಕ್ತಿಯನ್ನು ಬೆಳೆಸಿಕೊಂಡ ಎನ್ನುವಾಗಲೇ ಅವನ ೨೦ನೇ ವಯಸ್ಸಿನಲ್ಲಿ ಅಕಾಲ ಮರಣ ಹೊಂದಿದ. ಅದು ಬೇಂದ್ರೆಯವರಿಗೆ ಸಿಡಿಲುಬಡಿದ ಹಾಗಾಗಿತ್ತು. 'ಕೊಳಲಾಗಬಹುದಿತ್ತು, ಕಳಲಿದ್ದಾಗಲೇ ಕಡಿದ ಕಾಳ !' ಎಂದು 'ಕರುಳಿನ ವಚನ'ದಲ್ಲಿ ಯಮನ ಕ್ರೌರ್ಯವನ್ನು ಚಿತ್ರಿಸಿ ತಮ್ಮ ನೋವನ್ನು ಕಾವ್ಯವಾಗಿಸಿದ್ದಾರೆ. ಮೂರನೆಯ ಮಗ ಭಾಸ್ಕರ ಜನಿಸಿದ ವರ್ಷವೇ ತೀರಿಕೊಂಡ. ನಾಲ್ಕನೆಯ ಮಗ ಪಾಂಡುರಂಗ (೧೯೨೮); ಇವರು ಪುಣೆಯಲ್ಲಿ ಒಂದು ಖಾಸಗಿ ಕೆಲಸದಲ್ಲಿದ್ದು ನಿವೃತ್ತರಾಗಿ ಅನಂತರ 'ಶ್ರೀಮಾತಾ' ಪ್ರಕಾಶನದ ಹೊಣೆಹೊತ್ತು ಬೇಂದ್ರೆ ಸಾಹಿತ್ಯದ ಪ್ರಕಾಶಕರಾಗಿದ್ದರು. ಅವರು ೨೦೦೩ರಲ್ಲಿ ತೀರಿಕೊಂಡರು. ಐದನೆಯ ಮಗ ವಾಮನ (೧೯೩೩); ಇವರು 'ಲಕ್ಷ್ಮೀಶನ ಜೈಮಿನಿಭಾರತ, ಒಂದು ಅಧ್ಯಯನ' ಎಂಬ ಮಹಾಪ್ರಬಂಧ ಬರೆದು ಪಿಎಚ್.ಡಿ. ಪಡೆದಿದ್ದಾರೆ. ಧಾರವಾಡದ ಕಿಟಲ್ ಮಹಾವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದು ನಿವೃತ್ತರಾಗಿ ಈಗ ವಿಶ್ರಾಂತಜೀವನ ನಡೆಸುತ್ತಿದ್ದಾರೆ. ಇವರು ಬೇಂದ್ರೆ ಸಾಹಿತ್ಯದ ಸಂಪಾದನಾ ಕಾರ್ಯ ಹಾಗೂ ಪ್ರಚಾರದಲ್ಲಿ ತಮ್ಮ ಎಲ್ಲ ಸಮಯವನ್ನೂ ಕಳೆಯುತ್ತಿದ್ದಾರೆ. ಆರನೇ ಮಗ ಆನಂದ ಹುಟ್ಟಿದ ವರ್ಷವೇ ಮರಣಹೊಂದಿ ದುಃಖದ ನೆರೆಯನ್ನು ತಂದೆ ತಾಯಿಗೆ ತಂದ. ಮೊದಲನೆಯ ಮಗಳಾಗಿ ಹುಟ್ಟಿದ ಕೂಸು ಲಲಿತೆ ಎಂಬ ಹೆಸರನ್ನು ಪಡೆದು ಹುಟ್ಟಿದ ವರ್ಷವೇ ಮರಣ ಹೊಂದಿತು. ಎರಡನೆಯ

ಮಗಳಾಗಿ ಹುಟ್ಟಿದ ಕೂಸು ಪ್ರೇಮ, ಲಲಿತೆಯ ಹಾದಿಯನ್ನೇ ಹಿಡಿಯಿತು. ಮೂರನೆಯ ಮಗಳು ಮಂಗಲೆ (೧೯೩೯) ವಿವಾಹವಾಗಿ ಸುಖದಿಂದಿದ್ದಾರೆ.

**ಮೊದಲ ಕೃತಿ :** ಬೇಂದ್ರೆಯವರ ಮೊದಲ ಪುಸ್ತಕರೂಪದ ಕೃತಿ 'ಕೃಷ್ಣಾ ಕುಮಾರಿ' (೧೯೨೨). ಅದನ್ನು ಅವರು ಷಟ್ಪದಿಕಾವ್ಯ, ಆಖ್ಯಾನಕಾವ್ಯ ಎಂದು ಕರೆದಿದ್ದಾರೆ. ಅವರು "ಶ್ರೀಆಲೂರ, ಶ್ರೀಜಠಾರ, ಶ್ರೀಕದಡಿಮಾಸ್ತರ ಇವರ ಪ್ರೋತ್ಸಾಹ, ಸಹಾಯ ನನಗೆ ಆಗದೆ ಇದ್ದರೆ ಈ ಕಾವ್ಯವೂ ಬಾಣಂತಿಯ ಕೋಣೆಯಲ್ಲಿಯೇ ತನ್ನ ಜೇಷ್ಠ ಬಂಧುಗಳ ಬಳಗದ ಕೂಡ ಬಳಲುತ್ತ ಬೀಳುತ್ತಿತ್ತು"[೭] ಎಂದು ಅಂದಿನ ಕನ್ನಡ ಪುಸ್ತಕ ಪ್ರಕಟಣೆಯ ಪರಿಸ್ಥಿತಿ ಯನ್ನು ವಿವರಿಸುತ್ತ ತಮಗೆ ಸಹಾಯನೀಡಿದ ಮಹನೀಯರನ್ನು ನೆನೆದಿದ್ದಾರೆ.

**ತಾಯಿ-ಅಂಬಿಕೆ :** ಬೇಂದ್ರೆಯವರಿಗೆ ತಾಯಿಯೇ ಸರ್ವಸ್ವ. ತಾಯಿ ಅಂಬಿಕೆಯ ಮಗ ದತ್ತಾತ್ರೇಯ. ಅವನೇ ಕವಿ 'ಅಂಬಿಕಾತನಯದತ್ತ'. ಬೇಂದ್ರೆಯವರು ಚಿಕ್ಕಂದಿನಲ್ಲಿ ತಂದೆಯನ್ನು ಕಳೆದುಕೊಂಡು, ಈ ಪ್ರಪಂಚ ಏನು ಎನ್ನುವ ಅರಿವು ಬರುವಾಗ್ಗೆ ಹೆಜ್ಜೆ ಹೆಜ್ಜೆಗೆ ಅವರನ್ನು ತಿದ್ದಿಮಿದ್ದಿ ಮನುಷ್ಯನನ್ನಾಗಿ ಮಾಡಿದವಳೇ ತಾಯಿ ಅಂಬವ್ವ. ಆಕೆಯು ಎದೆಗುಂದದೆ ಬಂದ ಕಷ್ಟವನ್ನು ಎದುರಿಸುತ್ತ ಧೈರ್ಯದಿಂದ ಜೀವನ ನಡೆಸುತ್ತಿದ್ದಳು. ಆ ತಾಯಿ 'ಹೆಣ್ಣು ಎನ್ನುವ ಮಾತು ತಾಯಿ ಎನ್ನುವ ಮಾತು ಎರಡಲ್ಲ ಒಂದೆಂದು ತಿಳಿಸಿದ' ಅನುಭವಿ. ಆ ತಾಯಿ ೧೯೨೪ರಲ್ಲಿ ಕಾಮನಕಟ್ಟೆಯಲ್ಲಿ ತೀರಿಕೊಂಡರು. ಬೇಂದ್ರೆಯವರಿಗೆ ಆಘಾತವಾದಂತಾಯಿತು. ಅವರು ಅನಾಥರಂತಾದರು. ಅವರ ಕಾವ್ಯ ಅನುಭಾವದ ಸ್ತರ ಪಡೆಯಲು ಸಾಧ್ಯವಾದದ್ದು ಅವರ ತಾಯಿಯಿಂದ. ಅವರು ತಾಯಿ ಎಂಬ ಎರಡಕ್ಷರದಲ್ಲಿ ಇಡೀವಿಶ್ವವನ್ನು ಅರಿಯಲು ಸಾಧ್ಯಮಾಡಿಕೊಂಡರು. ಅವರು ತಾಯಿಯನ್ನು ಕುರಿತು, "೧ ದೇಹ ಕೊಟ್ಟತಾಯಿ, ೨ ಮಾತುಕಲಿಸಿದ ತಾಯಿ, ೩ ಸಂಸ್ಕಾರ ಸಂಪನ್ನ ಮಾಡಿದ ತಾಯಿ, ೪ ಭೂಮಂಡಲದ ಮಾನವತೆಯಲ್ಲಿ ನೆಲೆಸಿದ ತಾಯಿ, ೫ ವಿಶ್ವೋದರದಲ್ಲಿ ಧರಿಸಿದ ತಾಯಿ. ಈ ಐದು ಐದೆಯರು ದತ್ತನ ತಾಯಂದಿರು. ಇದು ಪಂಚಕೋಶಗರ್ಭ. 'ಅಂಬಿಕೆ'ಯ ತೊಡೆ, ಹೊಟ್ಟೆ, ಎದೆ, ಕೊರಳು, ತುಟಿ, ಕಣ್ಣು – ಒಂದೊಂದರಲ್ಲಿಯೂ ಈ

ಮಹಾಸ್ಪರ್ಶವಿತ್ತು. ಆದರೆ ಆಕೆಯ ದೀಕ್ಷೆಯಲ್ಲಿ ಅನಂತ ಸಹನೆ ಇತ್ತು; ಯುಗಯುಗದ ನ್ಹೋಂಪಿಯ ಕಂಪಿತ್ತು. ತಂದೆಯ, ಅವನ ಬಳಗದ, ನಿಕಟ ಸಾನ್ನಿಧ್ಯದಿಂದ ದೈವವಂಚಿತನಾದ ನಾನು; ನನ್ನ ತಾಯಿ, ತಾಯಿಯ ತಾಯಿ, ಆಕೆಯ ತಾಯಿ ಇವರ ಪ್ರತ್ಯಕ್ಷಚಾರಿತ್ರ್ಯದಲ್ಲಿ ಪೌರುಷವನ್ನು ಕಂಡೆ"[೮] ಎಂದು ನುಡಿದಿದ್ದಾರೆ.

**ಗೆಳೆಯರ ಗುಂಪು :** ೧೯೧೫ರಲ್ಲಿ ಪುಣೆಯಲ್ಲಿ 'ಶಾರದಾಮಂಡಲ' ಸ್ನೇಹಿತರ ಕೂಟ ಆರಂಭಿಸಿ ಅನುಭವವಿದ್ದ ಬೇಂದ್ರೆಯವರು ಧಾರವಾಡದಲ್ಲಿ 'ಗೆಳೆಯರ ಗುಂಪು' ಸಂಘಟಿಸಿದರು. ಸಹಜ ಕಾವ್ಯಾಸಕ್ತಿಯ ಕನ್ನಡ ಮತ್ತು ಕನ್ನಡ ಸಂಸ್ಕೃತಿಯ ಆರಾಧಕರಾದ ಸರೀಕರ, ಹಿರಿಯರ, ಕಿರಿಯರ ಸಂಘಟನೆಯಾಗಿ 'ಗೆಳೆಯರ ಗುಂಪ'ನ್ನು ಕಟ್ಟಿದರು. ಆ ಗುಂಪಿಗೆ ಯಾವುದೇ ಸಾಂಸ್ಥಿಕ ಚೌಕಟ್ಟು ಇರಲಿಲ್ಲ. ಆ ಗುಂಪಿನ ನಾಯಕರು ಬೇಂದ್ರೆಯವರಾಗಿದ್ದರು. ಆ ಗುಂಪಿನಲ್ಲಿ ಶಂಬಾಜೋಶಿ, ಮಧುರಚೆನ್ನ, ಬೆಟಗೇರಿಕೃಷ್ಣಶರ್ಮ, ವಿ.ಕೃ.ಗೋಕಾಕ್, ರಂ.ಶ್ರೀ. ಮುಗಳಿ, ಸಿದ್ಧವನಹಳ್ಳಿ ಕೃಷ್ಣಶರ್ಮ, ಸಿಂಪಿಲಿಂಗಣ್ಣ, ಪ್ರಲ್ಹಾದ ನರೇಗಲ್ಲ, ಕೃಷ್ಣಕುಮಾರಕಲ್ಲೂರ, ಶೇ.ಗೋ. ಕುಲಕರ್ಣಿ, ನಾರಾಯಣ ಸಂಗಮ, ಬೆಳಗಾಂವಕರ ಮುಂತಾದವರಿದ್ದರು. ಆ ಗುಂಪು ೧೯೨೪ರ ಹೊತ್ತಿಗೆ ಸಾರ್ವಜನಿಕವಾಯಿತು. ೧೯೨೪ರಲ್ಲಿ ಅನಂತಪುರದಲ್ಲಿ ನಡೆದಕಾವ್ಯ ಸ್ಪರ್ಧೆಗೆ ಗೆಳೆಯರಗುಂಪಿನ 'ನಸುಕು' ಎಂಬ ಕೈಬರಹದ ಪತ್ರಿಕೆಯನ್ನು ಕಳಿಸಲಾಯಿತು. ಆ ಕೈಬರಹದ ಪತ್ರಿಕೆಯಲ್ಲಿ ಗೆಳೆಯರ ಕವನಗಳ ಜೊತೆಗೆ ಬೇಂದ್ರೆಯವರ ೪೭ ಕವಿತೆಗಳಿದ್ದವು. ಹೀಗೆ ಸಂಘಟಿತವಾಗಿ ಕಾವ್ಯಾಭ್ಯಾಸ ಮಾಡುವ ಕ್ರಿಯಾತ್ಮಕ ಚಟುವಟಿಕೆಯ ಕೇಂದ್ರವಾಗಿ ಆ ಗುಂಪು ಬೆಳೆಯಿತು.

ಆ ಗುಂಪು ಬೇಂದ್ರೆಯವರ ನಾಯಕತ್ವದಲ್ಲಿ ಈ ನಾಡಿನಲ್ಲಿ 'ನಾಡಹಬ್ಬ' ಆಚರಣೆಯ ಹುಟ್ಟುಹಾಕಿತು. ಪಂಪೋತ್ಸವ, ವಿದ್ಯಾರಣ್ಯೋತ್ಸವ ರವೀಂದ್ರೋತ್ಸವಗಳನ್ನು ಅವರು ಹಮ್ಮಿಕೊಂಡು ಜನಾದರಣೀಯ ಸಾಂಸ್ಕೃತಿಕ ಕೆಲಸಗಳನ್ನು ಮಾಡಿದರು. ೧೯೨೯ರಲ್ಲಿ ಬೆಳಗಾವಿಯಲ್ಲಿ ನಡೆದ ಕನ್ನಡ ಸಾಹಿತ್ಯಸಮ್ಮೇಳನದಲ್ಲಿ ಗೆಳೆಯರ ಗುಂಪಿನಪರವಾಗಿ ಬೇಂದ್ರೆಯವರು ತಮ್ಮ

'ಹಕ್ಕಿಹಾರುತಿದೆ ನೋಡಿದಿರಾ' ಎಂಬ ಕವನವನ್ನು ಓದಿ, ಸಭಿಕರಲ್ಲಿ ರೋಮಾಂಚನವನ್ನುಂಟುಮಾಡಿದರು.

'ಗೆಳೆಯರ ಗುಂಪಿ'ನ ಬಲದಿಂದ ಬೇಂದ್ರೆಯವರು ಸಾಹಿತ್ಯ ಪ್ರಸಾರ ಮತ್ತು ಪ್ರಕಟಣೆಯ ಹಲವು ಕಾರ್ಯಗಳನ್ನು ಕೈಗೊಂಡರು. ಗುರುದೇವರಾನಡೆಯವರ 'ಉಪನಿಷತ್ ರಹಸ್ಯ'ದ ಕನ್ನಡ ಅನುವಾದ ನೆರವೇರಿತು. ಹಲಸಂಗಿ ಗೆಳೆಯರ ಸಹಾಯ ಸಹಕಾರದಿಂದ ಜಾನಪದ ಸಂಗ್ರಹ ಕೃತಿ 'ಗರತಿಯ ಹಾಡು' ಸಿದ್ಧಪಡಿಸಿ ಪ್ರಕಟಿಸಿದರು. 'ಜಯಕರ್ನಾಟಕ'ವೆಂಬ ಪತ್ರಿಕೆಯನ್ನು ಪ್ರಾರಂಭಿಸಿದರು. ಕರ್ನಾಟಕ ಏಕೀಕರಣವನ್ನು ಸಂಕಲ್ಪವಾಗಿಸಿಕೊಂಡು ರಚಿಸಿದ ಆ ಗುಂಪಿನ ತರುಣ ಕವಿಗಳ ಆಯ್ದ ಕವನಗಳ ಸಂಕಲನವನ್ನು 'ನನ್ನದು ಈ ಕನ್ನಡನಾಡು' ಎಂಬ ಶೀರ್ಷಿಕೆಯಲ್ಲಿ ತಮ್ಮ ಸಂಪಾದಕತ್ವದಲ್ಲಿ (೧೯೨೮) ಪ್ರಕಟಿಸಿದರು. ೧೯೨೯ರಲ್ಲಿ 'ಹಕ್ಕಿಹಾರುತಿದೆ' ಕವನಸಂಕಲನವನ್ನು ಪ್ರಕಟಿಸಿದರು. ಆ ಸಂಗ್ರಹ 'ಇಂಗ್ಲಿಷ್ ಗೀತೆಗಳು' ನಂತರ ಬಂದ ಪ್ರಮುಖ ಸಂಗ್ರಹವಾಗಿ ಕನ್ನಡ ಸಾಹಿತ್ಯದ ಹೊಸ ಪ್ರಯೋಗದಲ್ಲಿಯ ಒಂದು ಮಹತ್ವದ ಕೊಡುಗೆಯಾಯಿತು. ಆ ಗುಂಪು 'ಜಯಕರ್ನಾಟಕ' 'ವಾಗ್ಭೂಷಣ' ಮತ್ತು 'ಸ್ವಧರ್ಮ' ಪತ್ರಿಕೆಗಳನ್ನು ತಮ್ಮ ಮುಖವಾಣಿಯನ್ನಾಗಿ ಮಾಡಿಕೊಂಡಿತು. ಬೇಂದ್ರೆಯವರು ಕರ್ನಾಟಕದಾದ್ಯಂತ ಸಾಹಿತ್ಯ ಪ್ರಚಾರಕರಾಗಿ ಸುತ್ತಾಡಿ, ಜನರಲ್ಲಿ ಕರ್ನಾಟಕ ಮತ್ತು ಕನ್ನಡದ ಬಗ್ಗೆ ಅಭಿಮಾನ ಮೂಡುವಂತೆ ಮಾಡಿದರು. 'ಗೆಳೆಯರ ಗುಂಪು' ತನ್ನ ಕರ್ತವ್ಯವನ್ನು ನಿರ್ವಹಿಸುತ್ತಾ ಯಾವುದೇ ರಾಜಕೀಯಕ್ಕೆ ಒಳಗಾಗದೆ ತಂತಾನೆ ೧೯೩೩ರಲ್ಲಿ ಒಡೆಯಿತು.

**ಹಕ್ಕಿಹಾರುತಿದೆ ನೋಡಿದಿರಾ :** ೧೯೨೯ರ ಬೆಳಗಾವಿ ಕನ್ನಡ ಸಾಹಿತ್ಯ ಸಮ್ಮೇಲನದಲ್ಲಿ ಬೇಂದ್ರೆಯವರು 'ಹಕ್ಕಿಹಾರುತಿದೆ ನೋಡಿದಿರಾ' ಎಂಬ ಕವನವನ್ನು ಓದಿ ಕನ್ನಡಿಗರ ಮನಹೊಕ್ಕು 'ಹಾಡುಹಕ್ಕಿ'ಯಾದರು. ಆ ಕವನದ ಓದಿನ ಪ್ರಭಾವಕ್ಕೊಳಗಾದ ಮಾಸ್ತಿಯವರು, "ಇವರು ಪದ್ಯಗಳನ್ನೋದುವಾಗ ಕೇಳುತ್ತ, ನಾನು ಅವುಗಳ ಸೊಗಸಿಗೆ ಮರುಳಾಗಿದ್ದೇನೆ. ಮರುಳು ಎಂದರೆ ಜನರು ಸರಿಯಾಗಿ ಅರ್ಥಮಾಡಿಕೊಳ್ಳುವರೋ ಇಲ್ಲವೋ ನನಗೆ ಸಂದೇಹ.

ಆದರೆ ಆ ಸಂದರ್ಭದಲ್ಲಿ ನನ್ನಂತೆ ಅನೇಕರಿಗೆ ಒದಗುವ ಸ್ಥಿತಿ ಆನಂದದಿಂದ ಉಂಟಾಗುವ ಮರುಳು ಎಂದೇ ಹೇಳಬೇಕು. ಬೇಂದ್ರೆಯವರು ಬೆಳಗಾವಿಯಲ್ಲಿ 'ಹಕ್ಕಿಹಾರುತಿದೆ ನೋಡಿದಿರಾ' ಎಂಬ ಪದ್ಯವನ್ನು ಓದುವಾಗ ತಲೆಗೆ ಹಿಂದುಸ್ತಾನದ ಪಗಡಿಯೊಂದನ್ನು ಸುತ್ತಿ ನಿಂತಿದ್ದರು. ಇವರ ಆಗಿನ ನಿಲುವು ನನ್ನ ಕಣ್ಣಿಗೆ ಗಾರುಡಿಗನೊಬ್ಬನ ನಿಲುವಿನಂತೆ ಕಂಡಿತು. ಈಗಲೂ ನನಗೆ ಬೇಂದ್ರೆಯವರ ಸಹಜವಾದನಿಲುವು, ಆ ಗಾರುಡಿಗನ ನಿಲುವೆಂದು ಕಾಣುತ್ತದೆ. ಅವರನ್ನು ಕುರಿತು ನಾನು ಬರೆದ ಒಂದು ಅಷ್ಟಷಟ್ಪದಿಯಲ್ಲಿ ಈ ಅಭಿಪ್ರಾಯಕ್ಕೆ ರೂಪುಕೊಟ್ಟೆನು. ಮರುಳು ಮಾಡು, ಗಾರುಡಿ ಎಂಬ ಮಾತುಗಳಲ್ಲಿ ಈಗ ನಮಗೆ ಅಲ್ಪಕಲ್ಪನೆಗಳು ಕಾಣುತ್ತವೆ. ಅವುಗಳ ಮೂಲ ಅರ್ಥದಲ್ಲಿ ಶಕ್ತಿ, ಶಾಂತಿ, ಓಜಸ್ಸು ಮಾತ್ರ ಸೂಚಿತವಾಗುತ್ತದೆ. ಅಷ್ಟನ್ನು ಮಾತ್ರ ನಾನು ಇಲ್ಲಿ ಉದ್ದೇಶಿಸಿದ್ದೇನೆ. ಬೇಂದ್ರೆಯವರ ಕವಿತೆಯ ವಿಶೇಷ ಲಕ್ಷಣ ಈ ಶಕ್ತಿ, ಈ ಶಾಂತಿ, ಈ ಓಜಸ್ಸು. ಇವರ ಕವಿತೆಯನ್ನು ಅರಿಯುವ ಜನರಿಗೆ ಇವಕ್ಕೆ ಮನ ತಗ್ಗಿಸದೆ ನಿಲುಗಡೆ ಇಲ್ಲ"[೯].

ಅಂತಹ ಗಾರುಡಿಗ ಕವಿಯ ಪ್ರಥಮಕವನ ಸಂಕಲನ 'ಗರಿ' ೧೯೩೨ರಲ್ಲಿ ಮಾಸ್ತಿಯವರ ಮತ್ತು ಬೆಂಗಳೂರಿನ ಮಿತ್ರರ ಪ್ರೇರಣೆಯಿಂದ ಪ್ರಕಟವಾಯಿತು. ಆ ಸಂಕಲನದ ಕವನಗಳು ೧೯೧೬ ರಿಂದ ೧೯೩೨ರ ಅವಧಿಯಲ್ಲಿ ರಚಿತವಾದವುಗಳು. ಆ ಕವನಗಳು ಇಂದಿಗೂ ಜನಪ್ರಿಯವಾಗಿರುವುದು ಅವುಗಳ ಹಿರಿಮೆಯನ್ನು ಸಾರುವಂತಿದೆ.

**ನರಬಲಿ :** 'ಗರಿ' ಸಂಕಲನದೊಳಗಿನ ಸ್ವಾತಂತ್ರ್ಯಸ್ಫೂರ್ತಿಯ 'ನರಬಲಿ' ಕವನ ಬೇಂದ್ರೆಯವರನ್ನು ಜೈಲಿಗೆ ಕಳಿಸಿತು. ಬ್ರಿಟೀಷ್ ಸರ್ಕಾರ ಅವರನ್ನು ಮೂರು ತಿಂಗಳು ಹಿಂಡಲಗಿ ಜೈಲಿನಲ್ಲಿಟ್ಟಿತು. ಅವರ ಚಿಕ್ಕಪ್ಪನವರ ಆರೋಗ್ಯ ಕೆಟ್ಟಿದ್ದರಿಂದ, ಅವರನ್ನು ಜೇಲಿನಿಂದ ಬಿಡುಗಡೆ ಮಾಡಿ, ಧಾರವಾಡದ ಹತ್ತಿರ ಮುಗದ ಎಂಬ ಹಳ್ಳಿಯಲ್ಲಿ ಒಂಬತ್ತು ತಿಂಗಳು ನಜರಕೈದಿಯಾಗಿ ಇಟ್ಟಿದ್ದರು. ಆ ಹೊತ್ತಿನಲ್ಲಿ ಕವಿವರ್ಯರು ದುರ್ಗಾದೇವಿಯ ಗುಡಿಯಲ್ಲಿ ಕುಳಿತು 'ಭೃಂಗದ ಬೆನ್ನೇರಿಬಂತು' ಎಂಬ 'ಭಾವಗೀತೆ' ರಚಿಸಿದರು. ಆ

ನಜರಕೈದಿ ಸೆರೆಯಿಂದ ೧೯೩೨ರಲ್ಲಿ ಬಿಡುಗಡೆಯಾಗಿ ಧಾರವಾಡಕ್ಕೆ ಬಂದರು. ಇದ್ದ ಮೇಷ್ಟರ ಕೆಲಸ ಹೋಗಿ ಬೇರೆ ಯಾರೂ ಅವರನ್ನು ಕೆಲಸಕ್ಕೆ ತೆಗೆದುಕೊಳ್ಳಬಾರದೆಂದು ಸರ್ಕಾರದ ಆದೇಶವಿದ್ದ ಕಾರಣ, ಅವರು ಎಂ.ಎ. ಪರೀಕ್ಷೆಯ ಅಭ್ಯಾಸಕ್ಕಾಗಿ ೧೯೩೩ರಲ್ಲಿ ಅವರ ಚಿಕ್ಕಪ್ಪನವರ ಮನೆ ಪುಣೆಗೆ ಹೋದರು. ೧೯೩೫ರಲ್ಲಿ ಎಂ.ಎ. ಪಾಸಾದರು. ಆದರೆ ವಿಧಿಯ ಆಟವೆಂಬಂತೆ ಆಶ್ರಯದಾತ ಚಿಕ್ಕಪ್ಪನನ್ನು ಅದೇ ವರ್ಷ ಕಳೆದುಕೊಂಡರು.

ತಮ್ಮನಾದ ಕೃಷ್ಣನಿಗೆ ಚಿಕ್ಕಮ್ಮನ ಸಂಬಂಧದ ಹುಡುಗಿಯನ್ನು ವಿವಾಹ ಮಾಡಿದ ಕಾರಣ ಆತ ಪುಣೆಯಲ್ಲಿಯೇ ಉಳಿದುಕೊಂಡ. ಬೇಂದ್ರೆಯವರು ಸಂಸಾರಸಮೇತ ಧಾರವಾಡಕ್ಕೆ ಬಂದರು. ಆಗ ಅವರಿಗೆ ನೌಕರಿ ಇರಲಿಲ್ಲ. ೧೯೩೬ ರಿಂದ ೧೯೪೪ರವರೆಗೆ ಸ್ಥಿರವಾದ ನೌಕರಿ ಇಲ್ಲದೆ ಅಲೆದಾಡಿದರು. ಆ ಅವಧಿಯಲ್ಲಿ ವಿಶಾಲಹೃದಯಿ ಮಾಸ್ತಿಯವರು ಬೇಂದ್ರೆಯವರನ್ನು ತಮ್ಮನಂತೆ ನೋಡಿಕೊಂಡರು. ಬೇಂದ್ರೆಯವರನ್ನು 'ಜೀವನ' ಪತ್ರಿಕೆಯ ಸಂಪಾದಕರನ್ನಾಗಿ ನೇಮಿಸಿದರು. ಆಗ ಬೇಂದ್ರೆಯವರು ಕರ್ನಾಟಕದಾದ್ಯಂತ ಪ್ರವಾಸ ಮಾಡಿ ಸಾಹಿತ್ಯ ಪ್ರಚಾರಮಾಡಿದರು. ಅದರೊಟ್ಟಿಗೇ ಅವರ ಆತ್ಮೀಯರ, ಸ್ನೇಹಿತರ, ಅಭಿಮಾನಿಗಳ ಬಳಗ ಬೆಳೆಯುತ್ತಹೋಯಿತು. ೧೯೪೧ರಲ್ಲಿ ಗದಗಿನ ವಿದ್ಯಾದಾನಸಮಿತಿ ಪ್ರೌಢಶಾಲೆಯವರು ಮುಖ್ಯೋಪಾಧ್ಯಾಯ ಹುದ್ದೆಗೆ ಆಹ್ವಾನಿಸಿದರು. ಬೇಂದ್ರೆಯವರು ನಂಬಿಗೆಯಿಂದ ಸಂಸಾರಸಮೇತ ಗದಗಿಗೆ ಹೋದರು. ಆದರೆ ಆ ವರ್ಷದ ಕೊನೆಯಲ್ಲಿ ಆ ಶಾಲೆಯವರು ಕೆಲಸದಿಂದ ತೆಗೆದುಹಾಕಿರುವುದಾಗಿ ಪತ್ರ ನೀಡಿದರು. ಬೇಂದ್ರೆಯವರು ಮತ್ತೆ ಧಾರವಾಡಕ್ಕೆ ಸಂಸಾರದೊಡನೆ ಬಂದು ೧೯೪೨ರಲ್ಲಿ ನ್ಯೂ ಇಂಗ್ಲಿಷ್ ಸ್ಕೂಲಿನಲ್ಲಿ ವಾರದಲ್ಲಿ ಮೂರುಸಲ ಮಾತ್ರ ಹೋಗಿಬರುವ ಶಿಕ್ಷಕನ ಕೆಲಸಕ್ಕೆ ಸೇರಿದರು. ಅವರ ಎಂ.ಎ. ವಿದ್ಯಾಭ್ಯಾಸಕ್ಕೆ ತಕ್ಕ ಉದ್ಯೋಗವನ್ನು ಪುಣೆ ಕಾಮರ್ಸ್ ಕಾಲೇಜಿನವರು ೧೯೪೨ರಲ್ಲಿ ನೀಡಿದರು. ಅವರು ಅಲ್ಲಿ ಅರೆಕಾಲಿಕ ಕನ್ನಡ ಪ್ರಾಧ್ಯಾಪಕರಾಗಿ ಕೆಲಸಮಾಡಿದರು. ಅದೇ ವರ್ಷ ಶ್ರೀಮಾತಾರವಿಂದರ ದರ್ಶನ ಪಡೆದರು.

**ಸಾಹಿತ್ಯ ಸಮ್ಮೇಳನದ ಅಧ್ಯಕ್ಷ :** ಜೀವನ ಹೋರಾಟದ, ಬದುಕಿನ ಬವಣೆಯ ಕಾವಿನಲ್ಲಿ ಬೇಂದ್ರೆಯವರ ಕಾವ್ಯ ಕುಸುಮಗಳು ಅರಳುತ್ತಿದ್ದವು. 'ಮೂರ್ತಿ ಮತ್ತು ಕಾಮಕಸ್ತೂರಿ', 'ಸಖೀಗೀತ', 'ಉಯ್ಯಾಲೆ', ನಾದಲೀಲೆ' ಎಂಬ ಕವನ ಸಂಕಲನಗಳನ್ನು ಮತ್ತು 'ಕನ್ನಡ ಮೇಘದೂತ'ವನ್ನು ಕನ್ನಡ ಸಾರಸ್ವತಲೋಕಕ್ಕೆ ಒಂದೊಂದಾಗಿ ನೀಡಿದರು. ಅವರ ಸಾಹಿತ್ಯ ಸೇವೆಯನ್ನು ಗೌರವಿಸಿ ಕನ್ನಡ ಸಾಹಿತ್ಯ ಪರಿಷತ್ತಿನವರು ಅವರನ್ನು ೧೯೪೩ರಲ್ಲಿ ಶಿವಮೊಗ್ಗದಲ್ಲಿ ನಡೆದ ೨೭ನೇ ಕನ್ನಡ ಸಾಹಿತ್ಯಸಮ್ಮೇಳನದ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿದರು. ಆ ಸಾಹಿತ್ಯ ಸಮ್ಮೇಳನದಲ್ಲಿ ಅವರು 'ಸಾಹಿತ್ಯದ ವಿರಾಟ್‌ಸ್ವರೂಪ'ವನ್ನು ಕುರಿತು ಭಾಷಣ ಮಾಡಿದರು.

ಬೇಂದ್ರೆಯವರು ೧೯೪೪ರಲ್ಲಿ ಸೊಲ್ಲಾಪುರದ ಡಿ.ಎ.ವಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾದರು. ಜೀವನಕ್ಕೆ ಒಂದು ನೆಲೆಬಂದಿತು. ಆದರೆ ವಿಧಿಯ ವಿಲಾಸ ವಿಪರೀತವಾಗಿತ್ತು. ಅವರು ಒಂದೇ ವಾರದ ಅವಧಿಯಲ್ಲಿ ಕೊನೆಯ ಮಗ ಆನಂದನನ್ನೂ, ಬೆಳೆದ ಹಿರಿಯಮಗ ರಾಮಚಂದ್ರನನ್ನೂ ಕಳೆದು ಕೊಂಡರು. ಆ ದಂಪತಿಗಳು ಜೀವನದ ಘೋರತೆಗೆ ನಲುಗಿಹೋದರು. ಆದರೂ ಬದುಕಬೇಕಲ್ಲ, ಬದುಕಿಗಾಗಿ ನೋವನ್ನು ತಮ್ಮ ಸಂಸ್ಕಾರಬಲದಿಂದ ಸಹಿಸಿಕೊಂಡು ಜೀವಿಸತೊಡಗಿದರು.

**ದತ್ತ ಉಪಾಸಕ :** ಸೊಲ್ಲಾಪುರದಲ್ಲಿದ್ದಾಗ ದತ್ತ ಸಾಕ್ಷಾತ್ಕಾರಪಡೆದ ಶತಾಯುಷಿಯಾದ ಪ್ರಭಾಕರ ಮಹಾರಾಜರ ದರ್ಶನಪಡೆದರು. ಇನ್ನೋರ್ವ ದತ್ತ ಉಪಾಸಕರಾದ ಗುಳವಣಿ ಮಹಾರಾಜರ ಸಂಪರ್ಕವೂ ದೊರೆತು ಬೇಂದ್ರೆಯವರು ದತ್ತಮೂರ್ತಿಯ ಉಪಾಸಕರಾದರು.

ಸೊಲ್ಲಾಪುರದ ಜೈನ ಧರ್ಮೀಯರ 'ಸನ್ಮತಿ' ಎಂಬ ಮರಾಠಿ ಮಾಸ ಪತ್ರಿಕೆಗೆ ಲೇಖನ ಬರೆದು ಕೊಡುತ್ತ, ಮರಾಠಿ ಸಾಹಿತ್ಯರಚನೆ ಮಾಡಿದರು. ಆ ಕಾರಣ ಜೈನ ಸಿದ್ಧಾಂತವನ್ನು ಅಭ್ಯಾಸಮಾಡಿದರು. ಜೈನಸಂಸ್ಥೆಯಾದ 'ಶ್ರಾವಿಕಾಶ್ರಮ'ದ ಅನಾಥ ವಿದ್ಯಾರ್ಥಿನಿಯರಿಗೆ ವಿದ್ಯೆ ಹೇಳಿಕೊಟ್ಟರು. ರತ್ನಾಕರವರ್ಣಿಯ 'ಭರತೇಶವೈಭವ'ವನ್ನು ಓದಿ ವಿವರಿಸಿ, ಅವರಿಗೆ ಅದರ

ಮಹತ್ತನ್ನು ತಿಳಿಸಿದರು. ಆ ಸಮಾಜಸೇವಾ ಕಾರ್ಯವನ್ನು ಸ್ನೇಹಕ್ಕಾಗಿ, ಸಮಾಜದ ಒಳಿತಿಗಾಗಿ ನಿಸ್ವಾರ್ಥವಾಗಿ ಮಾಡಿದರು. ಅಲ್ಲಿದ್ದ ಅವಧಿಯಲ್ಲಿ ಜೈನ ಹಾಗೂ ವೀರಶೈವ ಸಾಹಿತ್ಯದ ಆಳವಾದ ಅಧ್ಯಯನಮಾಡಿ ಅವುಗಳ ರಸವಿಮರ್ಶೆ ಮಾಡಿದರು. ಅವರ ತಾತ್ವಿಕ ಚಿಂತನೆಗೆ, ಆಧ್ಯಾತ್ಮಿಕ ಸಾಧನೆಗೆ ಅಲ್ಲಿನ ಸಿದ್ಧರಾಮೇಶ್ವರ ದೇವಾಲಯ, ಶುಭರಾಜರಮಠ ಸಹಾಯಕವಾದವು.

೧೯೪೬ರಲ್ಲಿ ಧಾರವಾಡದವರು ಬೇಂದ್ರೆಯುವರ ೫೦ನೇ ಹುಟ್ಟುಹಬ್ಬವನ್ನು ವೈಭವದಿಂದ ಆಚರಿಸಿ, ೧೦ ಸಾವಿರ ರೂಪಾಯಿಗಳ ನಿಧಿಯೊಂದನ್ನು ಅರ್ಪಿಸಿದರು. ಆ ಹೊತ್ತಿನಲ್ಲಿ ವಿಶೇಷ ಸಂಚಿಕೆಗಳು ಹೊರಬಂದವು. ಗಲಗಲಿಯ ಗೆಳೆಯರು ಅವರ 'ಹಾಡುಪಾಡು' ಕವನಸಂಕಲವನ್ನು ಪ್ರಕಟಿಸಿದರು. ಗಲಗಲಿಯ ಆನಂದ ಸಾಹಿತ್ಯಮಂದಿರವು 'ಬೇಂದ್ರೆವಾಙ್ಮಯದರ್ಶನ'ವೆಂಬ ಅವರ ಕಾವ್ಯವಿಮರ್ಶೆಯ ಪುಸ್ತಕವನ್ನು ಪ್ರಕಟಿಸಿ ಅವರಿಗೆ ಅರ್ಪಿಸಿತು. ತರುವಾಯ ಸೊಲ್ಲಾಪುರದವರೂ ಸಹ ಕವಿಯ ೫೦ನೇ ವರ್ಷದ ಹುಟ್ಟುಹಬ್ಬ ಆಚರಿಸಿದರು. ತಮಗೆ ಲಭಿಸಿದ ನಿಧಿಯಿಂದ ಬೇಂದ್ರೆಯವರು ತಮ್ಮ ಅಧ್ಯಯನಕ್ಕೆ ಬೇಕಾದ ಪುಸ್ತಕಗಳನ್ನೆಲ್ಲ ಕೊಂಡುಕೊಂಡರು.

ಬೇಂದ್ರೆಯವರಿಗೆ ೬೦ ವರ್ಷ ತುಂಬಿದ ಕಾರಣ ೧೯೫೬ರಲ್ಲಿ ಸೊಲ್ಲಾಪುರದ ಕೆಲಸದಿಂದ ನಿವೃತ್ತರಾಗಿ ಬೀಳ್ಕೊಂಡರು. ಸೊಲ್ಲಾಪುರದ ಸಹೃದಯ ಜನತೆ ಅವರ ೬೦ನೇ ಹುಟ್ಟುಹಬ್ಬ ಆಚರಿಸಿ ಸತ್ಕರಿಸಿದರು. ಸತ್ಕಾರಸಮಿತಿಯವರು ನಿಧಿ ಸಂಗ್ರಹಿಸಿ ಅವರಿಗೆ ಸಮರ್ಪಿಸಬೇಕೆಂದಿದ್ದ ಹಣವನ್ನು ಬೇಂದ್ರೆಯವರು ಶ್ರೀಮಾತಾರವಿಂದರ ಆಶ್ರಮಕ್ಕೆ ಕಾಣಿಕೆಯಾಗಿ ನೀಡಬೇಕೆಂದು ತಿಳಿಸಿದರು. ಆ ಸಂಭ್ರಮದ ಬೀಳ್ಕೊಡುಗೆ, ಜನ್ಮದಿನಾಚರಣೆಯ ಸಂತಸದೊಂದಿಗೆ ಬೇಂದ್ರೆಯವರು ಮರಳಿ ಧಾರವಾಡಕ್ಕೆ ತಮ್ಮ ಸಾಧನಕೇರಿ ನಿವಾಸಕ್ಕೆ ಬಂದರು. ಅದೇ ವರ್ಷ ಆಕಾಶವಾಣಿ ಧಾರವಾಡ ಕೇಂದ್ರದ ಸಾಹಿತ್ಯ ಸಲಹೆಗಾರರಾಗಿ ಆಯ್ಕೆಯಾದರು. ೬೦ನೇ ಹುಟ್ಟುಹಬ್ಬದ ಸನ್ಮಾನ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆಯಿತು. ಬೇಂದ್ರೆ 'ವರಕವಿ'ಯಾಗಿ ಕನ್ನಡ

ಕಾವ್ಯದ ಪ್ರಪಂಚಕ್ಕೆ 'ಹಾಡುಪಾಡು', 'ಗಂಗಾವತರಣ', 'ಸೂರ್ಯಪಾನ', 'ಅರಳು ಮರಳು', 'ಹೃದಯಸಮುದ್ರ', 'ಮುಕ್ತಕಂಠ', 'ಚೈತ್ಯಾಲಯ', 'ಜೀವ ಲಹರಿ' ಕವನಸಂಕಲನಗಳನ್ನು ನೀಡಿದರು. ಅವರ ಕಾವ್ಯದ ಸವಿಯನ್ನು ಅನುಭವಿಸಿದ ಜನತೆ, ಕವಿಜೀವವು ಸಾರ್ಥಕತೆಯ ಮನದಿಂದ ಹರ್ಷಿಸುವ ಹಾಗೆ ಆದರಿಸಿತು. ಅವರು ೧೯೬೬ರವರೆಗೆ ಆಕಾಶವಾಣಿಯ ಸಲಹೆಗಾರರಾಗಿ ದುಡಿದರು. ಆ ಹತ್ತುವರ್ಷದ ಅವಧಿಯಲ್ಲಿ ವಿಪುಲವಾಗಿ ಸಾಹಿತ್ಯ ಸೃಷ್ಟಿಸಿದರು. ಜನರ ಸಾಹಿತ್ಯಾಭಿರುಚಿಯನ್ನು ಬೆಳೆಸಲು ಕರೆಬಂದಕಡೆಗೆಲ್ಲ ಹೋಗಿ ಕಾವ್ಯಾರಾಧನೆ ನಡೆಸಿದರು.

**ನಾನಿನ್ನು ಹೋದರೂ ನಡೆದೀತು! :** ೧೯೫೯ರಲ್ಲಿ ಬೇಂದ್ರೆಯವರ 'ಅರಳುಮರಳು' ಕವನಗುಚ್ಛಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿತು. ೧೯೬೨ರಲ್ಲಿ ತುಮಕೂರು ಪುರಸಭೆಯವರು ಸನ್ಮಾನಮಾಡಿದರು. ಮೈಸೂರು ದಸರಾಉತ್ಸವಮಿತಿಯ ಕಡೆಯಿಂದ ೧೯೬೪ರಲ್ಲಿ ಸನ್ಮಾನ ನೆರವೇರಿತು. ೧೯೬೫ರಲ್ಲಿ ಅವರ ಕವನ ಮತ್ತು ವಿಮರ್ಶಾಲೇಖನಗಳ ಸಂಗ್ರಹ 'ಸಂವಾದ' ಎಂಬ ಮರಾಠಿಕೃತಿಗೆ ಮಹಾರಾಷ್ಟ್ರದ ಕೇಳಕರ ಪ್ರಶಸ್ತಿ ದೊರಕಿತು. ತರುವಾಯದಲ್ಲೂ ಅವರಿಗೆ ಹಲವು ಪ್ರಶಸ್ತಿಗಳು ಬಂದವು. ಮೈಸೂರುವಿಶ್ವವಿದ್ಯಾಲಯವು ಗೌರವಡಾಕ್ಟರೇಟ್ (೧೯೬೬) ನೀಡಿ ಗೌರವಿಸಿತು. ಕರ್ಣಾಟಕರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿತು. ಹೈದರಾಬಾದಿನ ಹಿಂದೀ ಪ್ರಚಾರಸಭಾದವರು 'ಸಾಹಿತ್ಯ ಆಚಾರ್ಯ' ಪ್ರಶಸ್ತಿ ನೀಡಿದರು. ಅದೇ ವರ್ಷ ಅವರ ೭೦ನೇ ಹುಟ್ಟುಹಬ್ಬವನ್ನು ಶಿರಹಟ್ಟಿಯಲ್ಲಿ ಆಚರಿಸಲಾಯಿತು. ಅದೇ ವರ್ಷ ಅವರಿಗೆ ಮೈಸೂರು ಸರ್ಕಾರವು ಗೌರವ ವಿಶ್ರಾಂತಿವೇತನ ನೀಡಿತು. ಆಗ ಕುಸಿದ ಆರೋಗ್ಯದಲ್ಲಿದ್ದ ಕವಿಪತ್ನಿ ಲಕ್ಷ್ಮೀಬಾಯಿಯವರು ಎಚ್ಚೆತ್ತು 'ನಿಮ್ಮ ವ್ಯವಸ್ಥೆ ಆಯಿತಲ್ಲ! ನಾನಿನ್ನು ಹೋದರೂ ನಡೆದೀತು!' ಎಂಬ ಅಭಿಪ್ರಾಯದ ಮಾತಾಡಿ ಇಹಲೋಕ ತ್ಯಜಿಸಿದರು. ಅವರ ಕೃತಿಗಳೆಲ್ಲದರ ಪ್ರಥಮಶ್ರೋತೃವಾಗಿ, ಅವರ ಕಾವ್ಯಪಕ್ಷಿಗೆ ರೆಕ್ಕೆಯಾಗಿ, ಪತಿಯ ಅಪೇಕ್ಷೆಗೆ ಅನುಕೂಲರಾಗಿದ್ದ ತ್ಯಾಗಮಯಿ ಇನ್ನಿಲ್ಲವಾದರು. ದಂಪತಿಗಳ ಪಾಡು ಮತ್ತು ದಾಂಪತ್ಯಪ್ರೀತಿಗಳು ಆನಂದದ ಮುಕ್ತಭಾವದ

ಕಾವ್ಯವಾಗಲು ಸ್ಫೂರ್ತಿಯಾಗಿದ್ದ-ಸಖಿ ಲಕ್ಷ್ಮೀಬಾಯಿಯವರು ಮರಣ ಹೊಂದಿದಾಗ ಸಖಿ ಬೇಂದ್ರೆಯವರು ದಾಂಪತ್ಯ ಸಾಧನೆಯ ಮಂಗಲವೆಂದು 'ಸೌಂದರ್ಯ ಲಹರಿ'ಯನ್ನು ಪಠಿಸಿದರು.

ಬೇಂದ್ರೆಯವರು ೧೯೬೭ರಲ್ಲಿ ತಮ್ಮ ಸಾಧನಕೇರಿಯ ನಿವಾಸಕ್ಕೆ 'ಶ್ರೀಮಾತಾ' ಎಂದು ನಾಮಕರಣ ಮಾಡಿದರು. ೧೯೬೮ರಲ್ಲಿ ಕೇಂದ್ರಸರ್ಕಾರ ಅವರಿಗೆ 'ಪದ್ಮಶ್ರೀ' ಪ್ರಶಸ್ತಿ ನೀಡಿ ಗೌರವಿಸಿತು. ಅದೇ ವರ್ಷ ಕರ್ನಾಟಕ ವಿಶ್ವವಿದ್ಯಾಲಯದವರು ಗೌರವ ಡಾಕ್ಟರೇಟ್ ನೀಡಿದರು. ೧೯೬೯ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಅವರಿಗೆ 'ಫೆಲೊ' ಪದವಿ ನೀಡಿತು.

ಬೇಂದ್ರೆಯವರು ಕನ್ನಡ ಕಾವ್ಯಸಿರಿ ಹೆಚ್ಚಿಸುತ್ತಾ, 'ಚೈತ್ಯಾಲಯ' 'ಜೀವಲಹರಿ', 'ನಮನ', 'ಸಂಚಯ', 'ಉತ್ತರಾಯಣ', 'ಮುಗಿಲಮಲ್ಲಿಗೆ', 'ಯಕ್ಷ-ಯಕ್ಷಿ', 'ನಾಕುತಂತಿ', 'ಮಾರ್ಯದೆ', 'ಶ್ರೀಮಾತಾ', 'ಬಾಹತ್ತರ', 'ಇದು ನಭೋವಾಣಿ', 'ವಿನಯ', 'ಮತ್ತೆ ಶ್ರಾವಣಾಬಂತು' ಕವನ ಸಂಕಲನಗಳನ್ನು ಕಾವ್ಯಲೋಕಕ್ಕೆ ನೀಡಿದರು. ೧೯೭೨ರಲ್ಲಿ ಕರ್ನಾಟಕ ಸರ್ಕಾರವು ಬೇಂದ್ರೆಯವರ ಜೀವನವನ್ನು ಕುರಿತು ಒಂದು ಸಾಕ್ಷ್ಯಚಿತ್ರತೆಗೆದು ಗೌರವ ತೋರಿಸಿತು. ಹೀಗೆ ಬೇಂದ್ರೆ ಕಾವ್ಯ ಬೆಳೆಯುತ್ತಿದ್ದಂತೆ ಅವರ ಆಯಸ್ಸಿನ ಪ್ರಮುಖ ಘಟ್ಟವನ್ನು ಗುರುತಿಸಿ ಗೌರವಿಸುವ ಸಂಪ್ರದಾಯ ಬೆಳೆಸಿಕೊಂಡ ಸೊಲ್ಲಾಪುರದವರು ೧೯೭೨ರಲ್ಲಿ ಅವರ ೭೫ನೇ ಹುಟ್ಟುಹಬ್ಬದ ನಿಮಿತ್ತ ಸನ್ಮಾನಿಸಿದರು.

**ಜ್ಞಾನಪೀಠ ಪ್ರಶಸ್ತಿ** : ಬೇಂದ್ರೆಯವರ ಸಾಹಿತ್ಯಸೇವೆಗೆ ಕಿರೀಟ ಪ್ರಾಯವಾಗಿ ೧೯೭೪ರಲ್ಲಿ ಅವರ 'ನಾಕುತಂತಿ' (೧೯೬೪) ಕೃತಿಗೆ ಭಾರತದ ಸರ್ವೋಚ್ಚ ಸಾಹಿತ್ಯ ಪ್ರಶಸ್ತಿಯಾದ 'ಜ್ಞಾನಪೀಠ ಪ್ರಶಸ್ತಿ' ದೊರಕಿತು. ಇದು ಕನ್ನಡಕ್ಕೆ ದೊರಕಿದ ಎರಡನೆಯ ಜ್ಞಾನಪೀಠ ಪ್ರಶಸ್ತಿ. ಇದಕ್ಕೆ ಮೊದಲು ಕುವೆಂಪು ಅವರ 'ಶ್ರೀರಾಮಾಯಣದರ್ಶನಂ' ಮಹಾಕಾವ್ಯಕ್ಕೆ ಆ ಪ್ರಶಸ್ತಿ ದೊರಕಿತ್ತು.

೧೯೭೬ರಲ್ಲಿ ಬೇಂದ್ರೆಯವರಿಗೆ ವಾರಾಣಸಿಯ ಕಾಶೀವಿದ್ಯಾಪೀಠ ಗೌರವ ಡಾಕ್ಟರೇಟ್‌ಪದವಿ ನೀಡಿತು. ಬೇಂದ್ರೆಯುವರು ತಮ್ಮ

ಇಳಿವಯಸ್ಸಿನಲ್ಲಿಯೂ 'ಒಲವೆ ನಮ್ಮ ಬದುಕು', 'ಚತುರೋಕ್ತಿ' ಎಂಬ ಸಂಕಲನಗಳನ್ನು ಕನ್ನಡಿಗರಿಗೆ ನೀಡಿದರು. ಅವರು ಸಾಹಿತ್ಯ ಪ್ರಪಂಚಕ್ಕೆ ನೀಡಿರುವ ಕೃತಿಗಳೆಂದರೆ ೨೯ ಕವನಸಂಗ್ರಹಗಳು, ೬ ವಿಮರ್ಶಾಗ್ರಂಥಗಳು, ೧೪ ನಾಟಕಗಳು, ೧ ಕಥೆ ಹಾಗೂ ಹರಟೆಗಳ ಸಂಗ್ರಹ, ೨ ಉಪನ್ಯಾಸ (ಭಾಷಣ) ಸಂಗ್ರಹಗಳು, ೭ ಅನುವಾದ ಕೃತಿಗಳು, ೫ ಮರಾಠಿ ಗ್ರಂಥಗಳು ಮತ್ತು ೧ ಇಂಗ್ಲಿಷ್ ಪುಸ್ತಕ.

ಬೇಂದ್ರೆಯವರು ವಯಸ್ಸಾದಂತೆ ಹೊಸಹವ್ಯಾಸಗಳನ್ನು ಬೆಳೆಸಿಕೊಂಡು, ಅಧ್ಯಯನ ಮಾಡಬೇಕಾದ ಹೊಸವಿಷಯಗಳತ್ತ ತಮ್ಮ ಮನಸ್ಸನ್ನು ಕುದುರಿಸಿಕೊಂಡದ್ದು ಕೌತುಕದ ವಿಷಯವಾಗಿದೆ. ಅವರು ೧೯೭೬ರನಂತರ ಗಣಿತ, ಭೌತಶಾಸ್ತ್ರ, ಜೀವವಿಜ್ಞಾನದ ಅಭ್ಯಾಸ ನಡೆಸಿದರು. ಅವರಿಗೆ ಕೊನೆಕೊನೆಗೆ ಶಬ್ದಗಳ ಸ್ಪಷ್ಟತೆಗಿಂತ ಸಂಖ್ಯೆಗಳ ನಿಖರತೆಕಡೆ ಹೆಚ್ಚು ಒಲವಾಗಿ ಸಾಂಖ್ಯ–ಸಂಖ್ಯಾ ಚಿಂತನೆಗೆ ತಮ್ಮ ಮನಸ್ಸನ್ನು ಮೀಸಲಾಗಿರಿಸಿಕೊಂಡರು. ಅವರು ತಮ್ಮದೇ ಆದ ವರ್ತುಳ, ಚಕ್ರ, ಚೌಕ, ಕೋಷ್ಟಕಗಳನ್ನು ಸಿದ್ಧಪಡಿಸಿ ಕೊಂಡು ಸಂಖ್ಯಾಶಾಸ್ತ್ರದ ಸಂಶೋಧನೆಯಲ್ಲಿ ತಲ್ಲೀನರಾಗಿದ್ದರು. ಸಂಖ್ಯಾಶಾಸ್ತ್ರದಲ್ಲಿನ ಶ್ರದ್ಧೆ, ನಂಬಿಕೆ, ವಿಶ್ವಾಸಗಳಿಂದ ಅಲ್ಲಿ ಕಂಡ ಸತ್ಯಕ್ಕೆ ಕಾವ್ಯರೂಪ ಕೊಟ್ಟರು.

ಬೇಂದ್ರೆಯವರು, ವಿನೀತ ರಾಮಚಂದ್ರರಾಯರು ಅನುವಾದಿಸಿದ ಕೃತಿ 'ಸುವರ್ಣವೃಷ್ಟಿ'ಗೆ ೧೯೮೦ ರ ಕೊನೆಯಲ್ಲಿ ಬರೆದುಕೊಟ್ಟ ಪ್ರಸ್ತಾವನೆಯೆ ಅವರು ಬರೆದ ಕೊನೆಯ ಮುನ್ನುಡಿಯಾಯಿತು.

ಕಾವ್ಯದ ಸಿದ್ಧಿಸಾಧಿಸಿ, ಸಂಖ್ಯಾಶಾಸ್ತ್ರದ ಸಿದ್ಧಿಗಾಗಿ ಚಿಂತನೆ ನಡೆಸುತ್ತ ಸ್ಪಷ್ಟತೆಯ ಕಾಣ್ಕೆಗೆ ಮನಸ್ಸುಗೊಡುತ್ತಿದ್ದಾಗ ಬಳಲಿದ ಶರೀರದ ಆರೋಗ್ಯ ಕುಸಿಯಿತು. ಅವರ ಗಾಲ್‌ಬ್ಲಾಡರ್‌ನಲ್ಲಿ ಹರಳು ತೆಗೆಸಲು ಮುಂಬೈನ ಹರಿಕಿಸನ್‌ದಾಸ್ ಆಸ್ಪತ್ರೆಗೆ ಕೊಂಡೊಯ್ದು ವಾಮನಬೇಂದ್ರೆಯವರು ಶಸ್ತ್ರ ಚಿಕಿತ್ಸೆ ಮಾಡಿಸಿ ಹರಳು ತೆಗೆಸಿದರು. ಅನಂತರ ಅವರಿಗೆ ಹಸಿವುಕಟ್ಟಿ, ಅನ್ನ

ಸೇರದೆ ಅದೇ ಆಸ್ಪತ್ರೆಯಲ್ಲಿ ೨೬-೧೦-೧೯೮೧ ದೀಪಾವಳಿ-ನರಕ ಚತುರ್ದಶಿ ದಿನ ಮಧ್ಯಾಹ್ನ ೧-೧೮ಕ್ಕೆ ನಿರ್ವಾಣ ಹೊಂದಿದರು.

ಹಗಲಿರುಳ ತಾಳಕ್ಕ
ಮುಗಿಯದ ಕಾಳಕ್ಕ
ಜನುಮಗಳ ಮ್ಯಾಳಕ್ಕ
ಕುಣಿಯೋಣು ಬಾರಽ
ಕುಣಿಯೋಣು ಬಾ॥

ಎಂದು ಹಾಡಿದ ಕವಿ ಬೆಳಕಿನ ಹಬ್ಬದಂದು ಬೆಳಕಾಗಿ ಹೋದರು.

# ಸಾಹಿತ್ಯಸಿದ್ಧಿ : ಕಾವ್ಯ

## ಕೃಷ್ಣಾಕುಮಾರಿ

ಪುಸ್ತಕ ರೂಪದಲ್ಲಿ ಪ್ರಕಟವಾದ ಬೇಂದ್ರೆಯವರ ಮೊದಲ ಕೃತಿ 'ಕೃಷ್ಣಾಕುಮಾರಿ' (೧೯೨೨). ಅದನ್ನು ಬೇಂದ್ರೆಯವರು ಷಟ್ಪದಿಕಾವ್ಯ, ಆಖ್ಯಾನಕಾವ್ಯ ಎಂದು ಕರೆದಿದ್ದಾರೆ. ಕೃಷ್ಣಾಕುಮಾರಿ ಉದಯಪುರದ ರಾಜ ರಾಣಾ ಭೀಮಸಿಂಹನ ಮಗಳು. ಅವಳ ಆತ್ಮಹತ್ಯೆಯ ದಾರುಣಕಥೆ ಅದು. ಅವಳು ರಜಪೂತ ರಮಣಿಯರ ಲಾವಣ್ಯಲತೆಗೆ ಬಿಟ್ಟ ಹೂವಿನಂತಿದ್ದಳು. ಅವಳು ಪ್ರೀತಿಸಿ ವರಿಸಬೇಕೆಂದಿದ್ದ ಜೋಧಪುರದರಸನು ಸಾಯುವನು. ಆನಂತರ ಅವಳನ್ನು ಜಯಪುರದ ಜಗತ್ಸಿಂಹನಿಗೆ ಕೊಡಲು ಭೀಮಸಿಂಹ ಒಪ್ಪುವನು. ಅಷ್ಟರಲ್ಲಿ ಜೋಧಪುರದ ಅರಸನಾಗಿ ಬಂದ ಮಾನಸಿಂಹನು ಕುಟಿಲನೀತಿಯಿಂದ ಭೀಮಸಿಂಹನನ್ನು ಸೋಲಿಸುವನು. ಭೀಮಸಿಂಹ ನಿಸ್ಸಹಾಯಕನಾಗುವನು. ಜಗತ್ಸಿಂಹ ಮತ್ತು ಮಾನಸಿಂಹರಲ್ಲಿ ಯುದ್ಧವಾಗಿ ಇಬ್ಬರೂ ನಂದಿದಂತಾಗುವರು. ಅದೇ ಸಮಯಕ್ಕೆ ರಜಪೂತ ಸ್ಥಾನಕ್ಕೆ ವಿಧಿಯಂತೆ ಅಮೀರಖಾನ ಬರಲು, ನಿರುಪಾಯಳಾದ ಕೃಷ್ಣಾಕುಮಾರಿ ವಿಷ ಕುಡಿದು ಮಡಿಯುವಳು. ಸಾವನ್ನು ಬರಮಾಡಿಕೊಂಡ ಮುಗ್ಧೆ ಕೃಷ್ಣಾಕುಮಾರಿಯ ಮನದ ಮಿಡಿತವು 'ಕೃಷ್ಣಾಕುಮಾರಿ' ಕಾವ್ಯವಾಗಿದೆ.

ಬೇಂದ್ರೆಯವರು ಆ ಕಾವ್ಯಕ್ಕೆ ಮಂಗಳ ಹಾಡುತ್ತಾ ಹೀಗೆ ಪ್ರೇಮ ದರ್ಶನವನ್ನು ನೀಡಿದ್ದಾರೆ:

ಪ್ರೇಮಲತೆ ! ಮೂರ್ತಿಮಾನ್ ಪ್ರೇಮಲತೆಯೇ ನಿನ್ನ
ಕಾಮಲತೆಯೆಂದು ಕಾಮಿಸಿದರೌ ! ನಿನ್ನನ್ನು

ಹೋಮಿಸಿದರೌ ಕುಸುಮ ಸುಕುಮಾರಕುವರಿಯೇ ಕಾಮಾಗ್ನಿಹೋತ್ರದಲ್ಲಿ
ಸೋಮಾನನೆ! ಪದ್ಮ-ಪಾದ-ರಜ-ಪೂತರೀ
ಭ್ರಾಮಿಸಿದ ರಜಪೂತರೀಗ ಬೀಳಲಿಯೆಂದು
ನೇಮಿಸಿದನೌ ವಿಧಿಯು, ದೇವಭುಕ್ತಳಿದಾಗು ಹೋಗುಸೌಭಾಗ್ಯವೇಭಾವೇ!

## ಗರಿ

**ಊದುಗರಿಯ ಹಾರಿಸು :** 'ಗರಿ' ಬೇಂದ್ರೆಯವರ ಪ್ರಥಮ ಪ್ರಕಟಿತ ಕವನಸಂಗ್ರಹವಾಗಿದೆ. ಅವರು ೧೯೧೮ರಿಂದ ೧೯೩೨ರ ಅವಧಿಯಲ್ಲಿ ರಚಿಸಿದ ಕವನಗಳ ಆಯ್ದ ಸಂಗ್ರಹ ಅದು. ಅವರ 'ಬೆಳಗು' ಕವನದಿಂದ ಪ್ರಭಾವಿತರಾದ ಮಾಸ್ತಿಯವರು, ಕವಿಕಾವ್ಯ ಪಕ್ಷಪಾತಿಗಳಾದ ಹಿರಿಯರು ಮತ್ತು ಮಿತ್ರರ ಇಷ್ಟದಂತೆ ಬೆಂಗಳೂರಿನಿಂದ 'ಗರಿ' ಕವನಸಂಕಲನವನ್ನು ೧೯೩೨ರಲ್ಲಿ ಪ್ರಕಟಿಸಿದರು. 'ಗರಿ' ಸಂಗ್ರಹದ ಕವನಗಳಲ್ಲಿನ ಕಾವು ಮತ್ತು ಬೆಚ್ಚನೆಯ ಪ್ರೀತಿಯ ಆಹ್ಲಾದದಿಂದ ಅವು ಇಂದಿಗೂ ಜನಪ್ರಿಯವಾಗಿವೆ. ಆ ಸಂಕಲನದ ಹೆಸರು ಹೊಂದಿದ 'ಗರಿ'ಕವನವು; ಹಕ್ಕಿ ಗಾಳಿಯ ಹಾಗೆ ಸಾಗಿದ ಹಕ್ಕಿಯಾದ ಕವಿ, ಅವನ ಜೀವಭಾವದ ಭಾಗವಾದ ಕವನಗರಿಯನ್ನು ಮನೋಹರವಾಗಿ ಚಿತ್ರಿಸಿದೆ. ಕಾವ್ಯವೆಂಬುದು ಸುಂದರ ಭಾವಸಮ್ರಾಜ್ಯ. ಅದು 'ಎಲ್ಲೆ ಕಟ್ಟು ಇಲ್ಲದಾ ಬಾನಬಟ್ಟೆ'ಯಂತೆ ವಿಸ್ತಾರವಾದದ್ದು. ಅಲ್ಲಿ ಭೂತದ ಪರಂಪರೆಯಲ್ಲಿ ವರ್ತಮಾನದ ಬದುಕುತಿಳಿದು, ಭವಿಷ್ಯತ್ತನ್ನು ಹಸನು ಮಾಡಿಕೊಳ್ಳುವ ಕ್ರಿಯಾತ್ಮಕ ಜೀವಚೇತನ ಭಾವರೂಪಿಯಾಗಿ 'ಹಕ್ಕಿಗಾಳಿ' ಪ್ರವಹಿಸುತ್ತಿದೆ. ಆ ಕ್ರಿಯಾತ್ಮಕ ಜೀವಚೇತನದ 'ಹಕ್ಕಿಗಾಳಿ'ಯ ಹಾಗೆ ಸಾಗಿದ, ಹಾರುವಂಥ ಹಕ್ಕಿಯೇ ಕವಿ. ಅವನು ಹಾರಿದ ಜಾಡಿನಲ್ಲಿ ಉದುರಿದ ಗರಿಗಳೆ ಕವನಗಳು ಎಂದು 'ಗರಿ' ಕವನದಲ್ಲಿ ಬೇಂದ್ರೆಯವರು ನುಡಿದಿದ್ದಾರೆ:

ಅದರ ಹಾಗೆ ಸಾಗಿದಾ
ಹಾರುವಂಥ ಹಕ್ಕಿಯ
ಜಾಡು ಹಿಡಿದು ನಡೆದಿವೆ
ಉದುರಿದಂಥ ಗರಿಗಳು

ಎಂಬ ಉಪಮೆಯು 'ಹಕ್ಕಿಗಾಳಿ'ಯ ಹಕ್ಕಿಯಗರಿಯಂತೆ ಕವನಗಳು ಸುಂದರವಾಗಿರುವುದನ್ನು ಚಿತ್ರಿಸುತ್ತ, ಕವಿಯ ಒಟ್ಟಂದದ ಪ್ರತಿಬಿಂಬವೇ ಕವನವೆಂಬುದನ್ನು ಧ್ವನಿಸುತ್ತದೆ.

ಗಾಳಿಪಕ್ಕದಲ್ಲಿ ಕ್ರೀಡೆಯಾಡುವ ಗರಿಗಳು ಭೂಮಿಯ ಸೆಳೆತದಿಂದ ಭೂಮಿಗಿಳಿದರೆ; ಆ ಕವನಗಳು ಅರ್ಥವಾಗಲಿಲ್ಲವೆಂದು, ಅದರ ಬಣ್ಣಕ್ಕೆ ಆಶ್ಚರ್ಯಪಟ್ಟು ಮುಚ್ಚಿಡಬೇಡ. ಅದರ ರೋಮಕೀಳಿ ಭಾವಬಂಧದ ಸೌಂದರ್ಯ ಕಾಣದಾಗದ ಅರಸಿಕನಾಗಬೇಡವೆಂದು ಬೇಂದ್ರೆ ಹೇಳುತ್ತಾರೆ. ಅದರ ಸಮಗ್ರ ಚಿತ್ರವನ್ನು ನಿನ್ನ ರಸಿಕತನದಿಂದ ನಿನ್ನ ಚಿತ್ತದಲ್ಲಿ ಕಲ್ಪಿಸಿಕೊಂಡು 'ಊದಿ ತೂರಿಹಾರಿಸು'. ಅದು ನಿನ್ನ ರಸಿಕ ಸಹೃದಯತೆಯ ಗಾಳಿಯಿಂದ ಜೀವ ಭಾವತುಂಬಿ ಹಾರುತ್ತದೆ. ಅವು 'ಹಾರಲೆಂದು ಹುಟ್ಟಿದಾ । ಹಕ್ಕಿಮೈಯ್ಯ ಗರಿಗಳು' ಎಂದಿದ್ದಾರೆ.

ಆ ಸಮಗ್ರ ಹಕ್ಕಿಯ ಸಂಕೇತಮಾತ್ರವಾದ ಗರಿಯಲ್ಲಿ ಆ ಹಕ್ಕಿಯ ಮಾಟ, ಆಟಕಂಡಾಗ ನೀನು 'ಹಿಗ್ಗಿಬೆಂಬತ್ತುತಾ । ನವಿಲು ಆಗಿ ಕುಣಿಯುವೆ' ಎಂದು ರಸಿಕ ಸಹೃದಯನಿಗೆ ತಿಳಿಸಿದ್ದಾರೆ.

ಅದುವು ಸೊಗಸದಿದ್ದರೂ
ಊದು ಗರಿಯ ಹಾರಿಸು
ಕಣ್ಣ ಮರೆಗೆ ಒಯ್ಯಲು
ಇದೆ ಸಮರ್ಥ ಗಾಳಿಯು.

ನೀನು ಊದು ಗರಿಯ ಹಾರಿಸು. ಕಣ್ಣ ಮರೆಯಾಗುವ ಗರಿ, ಜೀವನವೈಭವದ ಹಾರುಶಕ್ತಿಯ ಕಾಣ್ಕೆ ಕಾಣಲು ನಿನ್ನ ಊದು ಅಂದರೆ ನಿನ್ನ ಗಾಳಿಯಾದ ಜೀವಶಕ್ತಿಯು ಸಮರ್ಥವಾಗಿರುವುದನ್ನು ನಿನ್ನ ಅಳವಿಗೆ ತರುತ್ತದೆ. ನಿನ್ನಲ್ಲಿ 'ಇದೆ ಸಮರ್ಥಗಾಳಿಯು' ಎಂದು ಭರವಸೆಯನ್ನು ನೀಡುತ್ತ ಕವಿ ಸಹೃದಯರ ಸೂಕ್ಷ್ಮಭಾವ ಸಂಬಂಧವನ್ನು ಚಿತ್ರಿಸಿದ್ದಾರೆ. ಹಾಗೆ ಸಹೃದಯನಿಂದ ಹಾರಿದ ಕವನ 'ಗರಿ' ಇನ್ನೊರ್ವಸಹೃದಯನ ಮನ ಅರಳಿಸಿ ಕ್ರಿಯಾಶೀಲವಾಗುತ್ತ

ಸಾಗುತ್ತಿರುತ್ತದೆ ಎಂದು ಆ ಕವನದಲ್ಲಿ ಬೇಂದ್ರೆಯವರು ಕವನಗಳ ಸಹಜ ಜೀವಂತಿಕೆಯ, ಬದುಕಿಉಳಿವ, ಸತ್ವತುಂಬಿದ ಸತ್ಯವನ್ನು ಸಾರಿದ್ದಾರೆ.

**ಬೆಳಗು** : 'ಗರಿ' ಸಂಕಲನದ 'ಬೆಳಗು' ಪ್ರಕೃತಿಯನ್ನೂ ಮಾನವರನ್ನೂ ಬೆಸೆಯುವ, ಜೀವನೋತ್ಸಾಹತರುವ ಕವನವಾಗಿದೆ. ಆ ಕವಿತೆಯಲ್ಲಿ ಬೇಂದ್ರೆಯವರು ಹೊಸಛಂದಸ್ಸನ್ನು ಬಳಸಿದ್ದಾರೆ. ಆ ಕವಿತೆ ಕನ್ನಡಕಾವ್ಯ ಪರಂಪರೆಯಲ್ಲಿಯೇ ಅಪರೂಪದ ಸೂರ್ಯೋದಯದ ನಿಸರ್ಗ ಕವಿತೆಯಾಗಿದೆ. ಅಲ್ಲಿ ರೂಪುಗೊಂಡ ಶಾಂತಿರಸವೇ ಮುಂದೆ ಅವರ ಕಾವ್ಯದ ತುಂಬ ಪ್ರೀತಿಯ ಶಾಂತಿರಸವಾಗಿ ಹರಿದಿದೆ :

ಮೂಡಲ ಮನೆಯಾ ಮುತ್ತಿನ ನೀರಿನ
ಎರಕsವ ಹೊಯ್ದಾ
ನುಣ್ಣ-ನ್ನೆರಕsವ ಹೊಯ್ದಾ
ಬಾಗಿಲು ತೆರೆದೂ ಬೆಳಕು ಹರಿದೂ
ಜಗವೆಲ್ಲಾ ತೊಯ್ದಾ
ಹೋಯ್ತೋ-ಜಗವೆಲ್ಲಾ ತೊಯ್ದಾ

* * *

ಗಿಡಗಂಟೆಯಾ ಕೊರಳೊಳಗಿಂದ
ಹಕ್ಕಿಗಳಾ ಹಾಡು
ಹೊರಟಿತು-ಹಕ್ಕಿಗಳಾ ಹಾಡು.
ಗಂಧರ್ವರಾ ಸೀಮೆಯಾಯಿತು
ಕಾಡಿನಾ ನಾಡು
ಕ್ಷಣದೊಳು-ಕಾಡಿನಾ ನಾಡು.

ಮಾಸ್ತಿಯವರು 'ಬೆಳಗು' ಕವನವನ್ನು ಓದಿ ಆನಂದಿಸಿ, ಆ ಆನಂದವನ್ನು ವ್ಯಕ್ತಪಡಿಸಿರುವ ರೀತಿ ಆ ಕವನದ ಉತ್ತಮವಿಮರ್ಶೆಯಾಗಿದೆ. 'ಈ ಬಗೆಯ ಕೃತಿಯಲ್ಲಿ ಕವಿ ಅನುಸರಿಸಿರುವ ಪದ್ಧತಿ ಅನನ್ಯ ಸಾಧಾರಣವಾದದ್ದು. ಉದಯದ ವರ್ಣನೆಯ 'ಗಿಡಗಂಟೆಯಕೊರಳು' ಎಂಬ ಮಾತಿನಿಂದಲೇ

ಇದನ್ನು ಉದಾಹರಿಸಬಹುದು. ಗಿಡದ ಆನಂದ, ತನ್ನ ಆನಂದ, ಗಿಡದಲ್ಲಿ ಕುಳಿತ ಹಕ್ಕಿಯ ಆನಂದ, ಬೀಸುವ ಗಾಳಿಯ ಆನಂದ ಇವು ಬೇರೆ ಬೇರೆ ಎಂದು ತಿಳಿದವನು ಅದನ್ನು ಬಿಡಿಸಿಬಿಡಿಸಿ ಹೇಳುತ್ತಾನೆ. ಇವುಗಳೆಲ್ಲ ಒಂದು ಆನಂದ, ನಾಲ್ಕುಕಡೆ ಕಂಡಿರತಕ್ಕದ್ದು ಎಂದು ಬುದ್ಧಿಯಿಂದ ತಿಳಿಯುವವನು, ಇದೊಂದು ವಿಚಾರ ಎಂಬಂತೆ ಹೇಳುತ್ತಾನೆ. ಇದಕ್ಕೂ ಮುಂದಿನ ಒಮ್ಮೈಯನ್ನು ಅರಿತವನು ಬೇಂದ್ರೆಯವರು ಹೇಳಿರುವಂತೆ 'ಗಿಡಗಂಟೆಯ ಕೊರಳು ಆನಂದದಿಂದ ಹಾಡಿತು' ಎನ್ನುತ್ತಾನೆ. ಬಾಳೆಲ್ಲ ಒಂದು ಎನ್ನುವುದು ತಿಳಿವಿಗೆ ಮಾತ್ರ ಕಂಡಾಗ ಅಲ್ಲ, ಅನುಭವದಿಂದ ಕಂಡಾಗ ಮಾತ್ರ ಈ ಮಾತು ಪ್ರಯತ್ನವಿಲ್ಲದೆ ಬರುತ್ತದೆ".[೧೦]

**ನರಬಲಿ :** 'ಗರಿ'ಯಲ್ಲಿನ 'ನರಬಲಿ' ಕವನ ಬೇಂದ್ರೆಯವರಿಗೆ ಜೇಲುವಾಸ ತಂದು, ಅವರ ಬದುಕಿನಲ್ಲಿ ಉಂಟು ಮಾಡಿದ ಪರಿಣಾಮ 'ಸಖೀಗೀತ'ದಲ್ಲಿ ಕಾವ್ಯವಾಗಿದೆ. ಏನೂ ಆಧಾರವಿಲ್ಲದ ನಿಸ್ಸಹಾಯಕನಾದ 'ರಾಷ್ಟ್ರಾಭಿಮಾನಿ ಕವಿ' ದೈವದ ಮೊರೆ ಹೋಗಿರುವುದು ಇಲ್ಲಿ ಕಂಡಿದೆ.

'ನರಬಲಿ' ಕವನವು ಬಲಿಮಾಡಿತೆನ್ನನು
ಹೆಳವನಿದ್ದಲ್ಲಿಗೆ ಹೊಳೆ ಬಂದಿತು
ಮನೆಯನು ಮುರಿದಿತು ಹಾರು ವಿಹಂಗಮ!
ಜಂಗಮ-ದೀಕ್ಷೆಯು ನಿನಗೆಂದಿತು.

ಪ್ರಾಣದ ಒಗರಷ್ಟು ಹಿಂಡಿತು ಹಿಂಡಲಿಗೆ
ಮುಗದದ ಮಲೆಗಾಳಿ ಮುಂದೆಳೆದಿತು
ಆಳುವವರ ಮೇಲೊಬ್ಬ ಆಳುವನಿರದಿರೆ
ಹಾಳಾಗಿ ಹೋಗಿತ್ತು ಈ ಜಗವು. (ಸಖೀಗೀತ)

ಸ್ವಾತಂತ್ರ್ಯದ ಸ್ಫೂರ್ತಿಯ 'ನರಬಲಿ' ಕವನದ ಕೆಲವು ಸಾಲುಗಳನ್ನು ಓದಿ, ಬ್ರಿಟೀಷರ ವಿರುದ್ಧ ಬೇಂದ್ರೆ ಮೊಳಗಿಸಿದ ದನಿಯನ್ನು ಕೇಳೋಣ :

ನಿಂದಿಹರಿದೊ ಇಗೊ !
ಎಕ್ಕಡಮೆಟ್ಟಿಹ ಎಕ್ಕ ಬಂಟರು

ಉಕ್ಕಡ ಗಾತ್ರದ ಉಕ್ಕಡದವರು
ಕಕ್ಕಡ ಹೊತ್ತಿಸಿ ಕಣ್ಣುಗಳಲ್ಲಿ
ಮಾಡಿಸೆ ಕಣ್ಣೀರ್ ಜಳಕವನು
ಏರಿಸೆ ರುಂಡದ ಹೂವುಗಳ
ಹಾಕಲು ಮದ್ದಿನ ಧೂಪವನು
ಬಾರಿಸೆ ಗುಂಡಿನ ಗಂಟೆಗಳ
ಬಂದಿತು ಬಂದಿತು ನೈವೇದ್ಯ
ನೀತಿಯ ಭೂತವೆ ಹೊರಡಿಲ್ಲಿಂದ
ದಯೆಯ ದೆವ್ವವೇ ನೀ ಹೊರಡು
ಕರುಳಿನ ಮರುಳೇ ಓಡಿಲ್ಲಿಂದ
ನ್ಯಾಯ ರಾಕ್ಷಸನೆ ನೀನೋಡು
ಬಲಗಾಲ್ ಬುಡದಿಂ ಬಿಡುಗಡೆ ಬಿಡಿಸಲು
ನರಬಲಿಯೇ ಬೇಕು !
ಇದುವೆ ಕಾಳಿಯ ಪೂಜೆಯು ಶುದ್ಧ !
ಇದಕ್ಕೆ ಹುಂಬರು ಎಂಬರು ಯುದ್ಧ !

* * *

ಕೋಳಿಯ ಕೊಯ್ದರೆ ಕೇಳುವರುಂಟು
ಕುರಿಯನು ಕೊಂದರೆ ಕೇಳುವರುಂಟು
ಕೋಣನ ಕಡಿದರು ಕಾಯುವರುಂಟು
ಗುಬ್ಬಿಮಾನವನ,
ಕೊಯ್ದರು, ಕೊಂದರು, ಕಡಿದರು ಏನು ?

## ಎಂಟು ಎದೆಯ ಬಂಟ ಬಡವ

**ಬಾಳಕರವಾಳ :** ಬೇಂದ್ರೆಯವರ ಜೀವನವನ್ನು, ಅವರ ಬಡತನದ ಬೇಗೆಯನ್ನು ಓದಿ ತಿಳಿದಾಗ, ಬೇಂದ್ರೆ ಬಂಡಾಯ ಕವಿಯಾದದ್ದು

ಸಹಜವೆನಿಸುತ್ತದೆ. ಅವರ ತೀವ್ರ ಸಾಮಾಜಿಕ ಪ್ರಜ್ಞೆಯು, ಸಮಾಜದಲ್ಲಿನ ಅಸಮತೋಲನಕ್ಕೆ ಕಾರಣವಾದ ಹಣವನ್ನೂ, ಅನ್ನವನ್ನೂ ಕಾವ್ಯದ ಮೂಸೆಯಲ್ಲಿ ಹಿಡಿಯಲು ಪ್ರಯತ್ನಿಸಿ ಯಶಸ್ವಿಯಾಗಿರುವುದು ಕಂಡುಬರುತ್ತದೆ. ನೋವಿನ ಭಾವದಷ್ಟೇ ತೀವ್ರವಾದ ಭಾಷೆಯನ್ನು ಬಳಸಿ ಆ ನೋವನ್ನು ಶಬ್ದದಲ್ಲಿ ಹಿಡಿದಿಟ್ಟ ಎಂಟು ಎದೆಯ ಬಂಟ ಬಡವನಾಗಿದ್ದಾರೆ.

ಇದೋ ಬಾಳ–
ಕರವಾಳ
ಎಂಟು ಎದೆಯ
ಬಂಟ ಬಡವ
ಇದನು ಅವನು
ಎಂತು ಪಿಡಿವ ?

ಎಂದು 'ಬಾಳಕರವಾಳ'ದಲ್ಲಿ ಬಾಳನ್ನು ಕತ್ತಿಯಾಗಿಸಿ ಅದನ್ನು ಹಿಡಿಯಲಾಗದ ಬಡವನಚಿತ್ರ ನೀಡುತ್ತಾ; ಅದನ್ನು ಹಿಡಿಯದೆ ವಿಧಿಯಿಲ್ಲ, ಅದನ್ನು ಹಿಡಿವ ಗಂಡು ಹುಟ್ಟಿದದಿನ 'ಮುಗಿಲು ಭುಗಿಲು । ನೆಲಕೆ ದಿಗಿಲು' ಎಂಬ ಸತ್ಯವನ್ನು ತಿಳಿಸಿದ್ದಾರೆ. ಅನ್ನಚಿನ್ನವಾದ ವ್ಯವಸ್ಥೆಯನ್ನು ಕಂಡು ರೋಷಗೊಂಡ ಬೇಂದ್ರೆಯವರು 'ಕೆಲಸವಿಲ್ಲದವರ ಹಾಡು' ಎಂಬ ಕವಿತೆಯಲ್ಲಿ :

ಆದರಿನ್ನು ತಿನ್ನುವದೇನನ್ನ ?
ಅನ್ನವೆಲ್ಲವೂ ಆಯಿತು ಚಿನ್ನ !
ನಾನೇ ನನ್ನನ್ನು ತಿನ್ನುವ ಅನ್ನ !
ತಿನ್ನಲಿ ಏನು ನಾ ನನ್ನನ್ನ ?
ಅನ್ನs ಅನ್ನs ಅನ್ನs ಅನ್ನs

ಎಂದು ಕೂಗಿ ವ್ಯವಸ್ಥೆಯ ದಾರುಣತೆಯನ್ನು ಚಿತ್ರಿಸಿದ್ದಾರೆ. 'ಅನ್ನದೊರೆಯ ದಕ್ಕಾಗಿ ಒಂದು ಹೊಟ್ಟೆಯೂ ಉರಿಯುತ್ತಿರುವವರೆಗೆ ಈ ಹಾಡು ತಪ್ಪಿಲ್ಲ' ಎಂಬ ಭಾವಸಂದರ್ಭ ಹೊಂದಿದ ಬಡವರ ಬಗ್ಗರ 'ತುತ್ತಿನ ಚೀಲ' ತನ್ನ

ಒಳಗಿನ ಒಳಗಿನ ಒಳದನಿಯಿಂದ 'ದೇವರದೊಂದು ಗೋರಿಯಕಟ್ಟಿ' ಎಂದು ಹೇಳುತ್ತದೆ 'ತುತ್ತಿನ ಚೀಲ' ಕವಿತೆಯಲ್ಲಿ :

ದೇವರದೊಂದು
ಗೋರಿಯ ಕಟ್ಟಿ,
ಧರ್ಮದ ಧೂಪಕ್ಕೆ
ಬೆಂಕಿಯ ನಿಕ್ಕಿ,
ಗಣಗಣ ಬಾರಿಸಿ
ಪ್ರಾಣದ ಗಂಟೆಯ
ಸಾವಿನ ನೋವಿಗೆ
ಕಲಮಲವೆದ್ದು
ನೆಲವನ್ನೆಲ್ಲಾ
ತುತ್ತುವೆನೆಂದು
ಗದರುತ್ತಿಹುದು
ಗರ್ಜಿಸುತಿಹುದು
ಬಡವರ ಬಗ್ಗರ
ತುತ್ತಿನ ಚೀಲದ
ಒಳಗಿನ ಒಳಗಿನ
ಒಳದನಿಯೊಂದು.

**ಸುಟ್ಟುಹಪ್ಪಳದ್ಹಾಂಗ ಸೊರಗಿದಿ :** 'ಬಿಸಿಲುಗುದುರೆ' ಎಂಬ ಕವನದಲ್ಲಿ ಮದುವೆಯ ಮೊದಲಿದ್ದ ನಗೆಯ ಬಾಳುವೆಯನ್ನು ನೆನೆಯತ್ತ :

ಹಳ್ಳದ ದಂಡ್ಯಾಗ ಮೊದಲಿಗೆ ಕಂಡಾಗ
ಏನೊಂದು ನಗಿ ಇತ್ತs
ಏನೊಂದು ನಗಿ ಇತ್ತ ಏಸೊಂದು ನಗಿ ಇತ್ತ
ಏರಿಕಿ ನಗಿ ಇತ್ತ ॥ಪ॥

ನಕ್ಕೊಮ್ಮೆ ಹೇಳ ಚೆನ್ನಿ, ಆ ನಗಿ ಇತ್ತಿತ್ತ
ಹೋಗೇತಿ ಎತ್ತೆತ್ತs ? ॥ಅನುಪಲ್ಲ॥

ಎಂದು ಸುಖದ ಸಂತಸದ ದಿನಗಳನ್ನು ನುರಿಸುತ್ತ, ಆ ನಗೆ ಬಿಸಿಲುಗುದುರೆ ಯಂತಾಗಿ ದಾರುಣ ಅನುಭವ ನೀಡಿದಾಗ, ನೊಂದಕವಿ; ತನ್ನ ಸಖಿ ಬಡತನಕ್ಕೆ ಬಲಿಯಾಗಿ, ಹೆತ್ತ ಮಕ್ಕಳಸಾವನ್ನು ನೋಡುತ್ತಾ ಬಾಳಿನ ಒಲೆಯ ಮೇಲೆ ಸುಟ್ಟ ಹಪ್ಪಳದ ಹಾಗೆ ಸೊರಗಿದ ಜೀವವಾಗಿ ಅವಳಿಗೆ ಮುಪ್ಪು ಬೇಗ ಬಂದಿದೆ ಎಂದು ನೊಂದು ನುಡಿಯುತ್ತಾರೆ :

ಬಡತನದ ಬಲಿಯಾಗ ಕರುಳಿನ ಕೊಲಿಯಾಗ
ಬಾಳ್ವಿಯ ಒಲಿಮ್ಯಾಗ
ಸುಟ್ಟು ಹಪ್ಪಳದ್ಹಾಂಗ ಸೊರಗಿದಿ ಸೊಪ್ಹಾಂಗ
ಬಂತಂತ ಮುಪ್ಪು ಬ್ಯಾಗ.

**ಕುರುಡು ಕಾಂಚಾಣ :** ತನ್ನ ಜೊತೆಗೆ ಬಡತನದ ಬೇಗೆಯಲ್ಲಿ ಬೆಂದ ಸಖಿಯನ್ನು ಕುರಿತು ಹಾಡಿದ, ತೀವ್ರ ಬಡತನದಲ್ಲಿ ಆರು ಮಕ್ಕಳನ್ನು ಕಳೆದುಕೊಂಡ ಬೇಂದ್ರೆ ಮಾತ್ರ 'ಕುರುಡು ಕಾಂಚಾಣ'ದಂತಹ ಕವನ ರಚಿಸಲು ಸಾಧ್ಯವಾಗಿದೆ:

ಬಾಣಂತಿಯೆಲುಬ ಸಾ-
ಬಾಣದ ಬಿಳುಪಿನಾ
ಕಾಣದ ಕಿರುಗೆಜ್ಜೆ ಕಾಲಾಗ ಇತ್ತೋ;
ಸಣ್ಣ ಕಂದಮ್ಮಗಳ
ಕಣ್ಣೀನ ಕವಡೀಯ
ತಣ್ಣನ್ನ ಜೋಮಾಲೆ ಕೊರಳೊಳಗಿತ್ತೋ,
ಬಡವರ ಒಡಲಿನ
ಬಡಬ್ಯಾನಲದಲ್ಲಿ
ಸುಡುಸುಡು ಪಂಜು ಕೈಯೊಳಗಿತ್ತೋ;
ಕಂಬನಿ ಕುಡಿಯುವ
ಹುಂಬ ಬಾಯಿಲೆ ಮೈ-
ದುಂಬಿದಂತುಧೋ ಉಧೋ ಎನ್ನುತಲಿತ್ತೋ;

ಕೂಲಿ ಕುಂಬಳಿಯವರ
ಪಾಲಿನ ಮೈದೊಗಲ
ಧೂಳಿಯು ಭಂಡಾರ ಹಣೆಯೊಳಗಿತ್ತೋ;

ಎಂದು ಯಲ್ಲಮ್ಮನ ಜೋಗಿತಿಯರ ಜೊತೆ ಕುರುಡು ಕಾಂಚಾಣವನ್ನು ರೂಪಕವಾಗಿ ಬಳಸಿದ್ದಾರೆ. ಕುರುಡು ಕಾಂಚಾಣದ ಜೋಗಿತಿ ಕುಣಿಯುವಾಗ ಸಾಬೂನಿನ ಬಿಳುಪಿನಂತಾದ ಸತ್ತಬಾಣಂತಿಯರ ಎಲುಬನ್ನು ಕಾಣದ ಕಿರುಗೆಜ್ಜೆಯಾಗಿ ಕಟ್ಟಿಕೊಂಡಿದೆ ಎಂದು ಮಾತಿನಿಂದ ವರ್ಣಿಸಲಾಗದ ಶೋಷಣೆಯನ್ನು ಶಬ್ದ ಚಿತ್ರವಾಗಿ ರೂಪಿಸಿದ್ದಾರೆ. ಅದು ತೊಟ್ಟ ತೊಡಿಗೆ ಹಾಲು ಸಿಗದೆ, ಆರೈಕೆ ಸಿಗದೆ ಸತ್ತ ಸಣ್ಣ ಕಂದಮ್ಮಗಳ ಕಣ್ಣಿನ ಕವಡೆ ಎಂದಿದ್ದಾರೆ. ಕವಡೆಯನ್ನು ಹಿಡಿದು ನೋಡಿದರೆ ಅದು ಕಣ್ಣಿನ ಆಕೃತಿಯಲ್ಲಿರುತ್ತದೆ. ಕವಡೆಯ ಸರಹಾಕಿಕೊಂಡು ಕುಣಿವ ಜೋಗಿತಿಯರನ್ನು ಕಂಡ ಬೇಂದ್ರೆಯವರು, ಕುರುಡು ಕಾಂಚಾಣದ ಕೊರಳಲ್ಲಿ 'ಸಣ್ಣ ಕಂದಮ್ಮಗಳ। ಕಣ್ಣೀನ ಕವಡೀಯ । ತಣ್ಣನ್ನ ಜೋಮಾಲೆ ಕೊರಳೊಳಗಿತ್ತೋ।' ಎಂಬ ಪ್ರತಿಮೆಗಳನ್ನು ಸೃಷ್ಟಿಸಿ 'ತಣ್ಣನ್ನ ಜೋಮಾಲೆ' ಎಂಬ ಶಬ್ದದಲ್ಲಿ ಸಾವಿನ, ಸಾವಿಗೆ ಕಾರಣವಾದ ಹಣದ ಕ್ರೂರತೆಯನ್ನು ಧ್ವನಿಸಿದ್ದಾರೆ. ಆ ಕುರುಡುಕಾಂಚಾಣದ ಕೈಲಿರುವುದು ಬಡವರ ಒಡಲಿನ ಹಸಿವಿನ ಸುಡು ಸುಡು ಪಂಜು ಎಂದು ಪ್ರತಿಮಾತ್ಮಕವಾಗಿ ಹೇಳಿ ಹಸಿವಿನ ಕಿಚ್ಚನ್ನು ಹಿಡಿದ ಹಣದ ಕ್ರೌರ್ಯವನ್ನು ಬಿಂಬಿಸಿದ್ದಾರೆ. ಅದು ದೀನದಲಿತರ ಕಂಬನಿಯನ್ನು ಕುಡಿದು ಆ ಹುಂಬಬಾಯಲ್ಲಿ ಉಧೋ ಉಧೋ ಎಂದು ಕುಣಿಯುತ್ತಿದೆ ಎಂಬ ದಾಹದಿಂದ ಗೂಳಿಡುವ ಪರಿ ಪ್ರತಿಮಾತ್ಮಕವಾಗಿ ಅದ್ಭುತವಾಗಿದೆ. ಅದು ಕೂಲಿನಾಲಿ ಮಾಡುವ ಜನರ ದುಡಿಮೆಯ ಮೈದೊಗಲಧೂಳನ್ನು ಭಂಡಾರವಾಗಿ ಹಣೆಯಲ್ಲಿ ಧರಿಸಿದೆ ಎಂದು ಹಣದ ಭಯಾನಕತೆಯನ್ನು ಚಿತ್ರಿಸಿದ್ದಾರೆ. ಅದು ಕುಣಿಯುತ್ತಿರುವ ರೀತಿ :

ಕುರುಡು ಕಾಂಚಾಣ ಕುಣಿಯುತ್ತಲಿತ್ತೋ ।
ಕಾಲಿಗೆ ಬಿದ್ದವರ ತುಳಿಯುತಲಿತ್ತೋ ॥

“ಕುರುಡು ಕಾಂಚಾಣ ಒಂದು ಅದ್ಭುತವಾದ ಪ್ರತಿಮಾ ಭಾವಗೀತೆ” ಎಂದು ಹೇಳುತ್ತ ಡಾ॥ ಪ್ರಭುಶಂಕರ ಅವರು “ಪಾಶ್ಚಾತ್ಯ ಸಾಹಿತ್ಯವನ್ನು ಬಲ್ಲವರು ಹೇಳುತ್ತಾರೆ, ಅಲ್ಲಿಯೂ ಇಷ್ಟು ಕಿರಿದರಲ್ಲಿ ಈ ತತ್ವ ಇಷ್ಟು ಶಕ್ತಿ ಪೂರ್ಣವಾಗಿ ರಸವ್ಯಂಜಕವಾಗಿ ನಿರೂಪಿತವಾಗಿಲ್ಲ”[೧೧] ಎಂದು ನುಡಿದಿದ್ದಾರೆ.

ವಿಶ್ವದ ಹಲವಾರು ಬಂಡವಾಳಷಾಹಿ ಬ್ಯಾಂಕುಗಳು, ಕಂಪನಿಗಳು ಮೋಸವಂಚನೆಯ ವ್ಯವಹಾರದಿಂದ ಮನಸೋ ಇಚ್ಚೆ ಕುಣಿದು ವಿಶ್ವ ವಾಣಿಜ್ಯ ವ್ಯವಸ್ಥೆ ಕುಸಿಯಲು ಕಾರಣವಾದವು. ನಮ್ಮ ದೇಶದಲ್ಲಿ ಹೇಗಾದರೂ ಹಣ ಮಾಡುವ ಪ್ರವೃತ್ತಿಗೆ ಒಳಗಾದ ಸತ್ಯಂ ಕಂಪ್ಯೂಟರ್ ಕಂಪನಿಯು ‘ಹ್ಯಾಂಗಾರೆ ಕುಣಿಕುಣಿದು ಮಂಗಾಟ ನಡೆದಾಗ’ ಅದು ತಾನೇ ತಾನಾಗಿ ಕುಸಿದು ಅಂಗಾತ ಬಿತ್ತು. ಆಗ ಅದನ್ನು ಎತ್ತಿ ಒಗೆಯಬೇಕಾಯಿತು. ಈ ಹಿನ್ನೆಲೆಯಲ್ಲಿ, ಹಸಿವು ಅನ್ನವನ್ನು ಹಿಡಿತದಲ್ಲಿಟ್ಟುಕೊಂಡ ಶೋಷಕರ ಮರ್ಮ ಅರಿತಿದ್ದ ವಿಶ್ವವ್ಯಾಪಕ ಚಿಂತನಶೀಲ ವ್ಯಕ್ತಿತ್ವವುಳ್ಳ ಬೇಂದ್ರೆಯವರು ಶೋಷಕರು ತಮ್ಮ ತೋಲತಪ್ಪಿದ ವರ್ತನೆಯಿಂದ ತಾವೇ ಕುಸಿದು ನಾಶವಾಗುವುದನ್ನು ಸಮರ್ಥವಾಗಿ ಈ ಕವನದ ಕೊನೆ ನುಡಿಯಲ್ಲಿ ಬಿಂಬಿಸಿದ್ದಾರೆ.

ಹ್ಯಾಂಗಾರ ಕುಣಿಕುಣಿದು
ಮಂಗಾಟ ನಡೆದಾಗ
ಅಂಗಾತ ಬಿತ್ತೋ, ಹೆಗಲಲಿ ಎತ್ತೋ.

## ಮಕ್ಕಳ ಬೇಂದ್ರೆ

ಬೇಂದ್ರೆಯವರು ಶಾಂತಕವಿ ಮುಂತಾದ ಗುರುಗಳಿಂದ ಸ್ಫೂರ್ತಿಪಡೆದು ಕವಿಗಳಾದಂತೆ ಕನ್ನಡದ ಮಕ್ಕಳನ್ನು ಉಲ್ಲಾಸಗೊಳಿಸುವ ಚೈತನ್ಯಪೂರ್ಣ ಕವನಗಳನ್ನು ರಚಿಸಿದ್ದಾರೆ. ಅವರ ಮಾತೃ ಹೃದಯದ ಮುಗ್ಧಭಾವದ ವಾತ್ಸಲ್ಯವು, ಶಿಕ್ಷಕನ ಅನುಭವದಿಂದ ಮಕ್ಕಳ ನಾಲಗೆಯ ಮೇಲೆ ನಲಿದು ಉತ್ಸಾಹ ನೀಡುವಂತಹುದಾಗಿದೆ. ಆ ಕವನಗಳು ಮಕ್ಕಳ ಆಹ್ಲಾದದ ನೆಲೆಯಾಗಿವೆ. ಕನ್ನಡದ ಮಕ್ಕಳು ಬೆಳೆಯುತ್ತಾ ಬೇಂದ್ರೆಯವರ ಕಾವ್ಯವನ್ನು ನುರಿಸುತ್ತ,

ತಮ್ಮ ವಯಸ್ಸು ಹಾಗೂ ಅನುಭವ ಹೆಚ್ಚಾದಂತೆಲ್ಲಾ ಆ ಕಾವ್ಯದ ರಸಾನುಭವವನ್ನು ದಕ್ಕಿಸಿಕೊಳ್ಳುತ್ತವೆ. ಅದು ಬೇಂದ್ರೆ ಕಾವ್ಯದ ವೈಶಿಷ್ಟ್ಯ.

ಅವ್ವನ ಸೀರಿ
ಮಡಿಚಲಾರೆ !
ಅಪ್ಪನ ರೊಕ್ಕ
ಎಣಿಸಲಾರೆ !
ಎಂಥ ಪ್ರಕಾಶಾ
ತುಂಬಿತಾಕಾಶಾ! ('ಅವ್ವನ ಸೀರಿ' : ಸಂಚಯ)

ಈ ಕವನವನ್ನು ಓದುವ ಕೇಳುವ ಮಕ್ಕಳಿಗೆ ಅವರು ಕಂಡ ಆಕಾಶ ಮತ್ತು ನಕ್ಷತ್ರಗಳು ಅಮ್ಮನ ಮಡಿಚಲಾಗದ ಸೀರೆಯಾಗಿ, ಅಪ್ಪನ ಎಣಿಸಲಾರದ ಹಣವಾಗಿ, ಅವು ತಮ್ಮದಂತೆನಿಸಿ ಆತ್ಮೀಯವಾಗುತ್ತವೆ. ಅವರ ನಾಲಿಗೆಗೆ ಒಗ್ಗುವ ನುಡಿಯಾಗಿ ಅವರ ಮನದಲ್ಲಿ ಪ್ರಕಾಶತುಂಬುತ್ತವೆ.

ಮಣ್ಣರಳಿ ಹೂವಾಗಿ । ನೂಲ ಬಟ್ಟೆಯಾಗಿ
ಮೈಮೈಗೆ ದಾರದಾಧಾರಾ, ಗುಡಿಗುಡಿಗೆ
ಹೂಬತ್ತಿ, ಹೊತ್ತಿ, ಮಣ್ಣರಳಿ ॥

ನೀರರಳಿ ತಾವರಿ । ಮಿನಮಿನ ಮೀನಕ್ಕ
ಬೆಳಕುಂಡು ಬಾಳಿರೆನತಾವ, ಹಗಲಿರುಳು
ಬೆಳಕನುಣಸ್ಯಾವ ನೀರರಳಿ ॥

* * *

ಬೀಸಿದರ ಕಾಳರಳಿ । ಕಾಸಿದರ ಅನ್ನರಳಿ॥
ನುರಿಸಿ ನುರಿಸಿದರ ಕವಳರಳಿ, ಎದಿಯರಳಿ
ಹಾಲು ತೊರೆದಾವ, ಮಗುವರಳಿ ॥ ('ಕಣ್ಣರಳು' : ನಾಕುತಂತಿ)

ಮಣ್ಣರಳಿ ಹೂವಾಗಿ ಬಂದ ಹತ್ತಿ, ಮೈಮುಚ್ಚಲು ದಾರದಾಧಾರವಾದ ಉಡುಪಾಗಿ, ಹೂಬತ್ತಿಯಾಗಿ ಉರಿದು ಬೆಳಕು ನೀಡುವುದು. ನೀರು ಅರಳಿ ತಾವರೆಯಾದುದು ಮಿನಮಿನವೆನ್ನುವ ಬೆಳಕನ್ನುಂಡು ಬಾಳಿ ಎಂದು

ಹೇಳುತ್ತಿದೆ. ಬೀಸಿದರೆ ಕಾಳು ಅರಳುವುದು. ಕಾಸಿ ಬೇಯಿಸಿದರೆ ಅಕ್ಕಿ ಅನ್ನವಾಗಿ ಅರಳುವುದು. ಅದೇ ಅನ್ನವನ್ನು ನುರಿಸಿ ನುಂಗಲು ಕವಳವಾಗಿ ಜೀವಶಕ್ತಿ ಯಾಗುವುದು. ಆ ಅನ್ನದಿಂದ ಎದೆಯರಳಿ ತಾಯಿಯೊಡಲಲ್ಲಿ ಮಗುವರಳುವ ಕೌತುಕ ಎಲ್ಲರ ಮನಸ್ಸನ್ನೂ ಅರಳಿಸುತ್ತದೆ.

**ಚಳಿ ಇರಲಿ ಮಳೆಬರಲಿ :** ಯಾವುದೇ ಋತುಮಾನದಲ್ಲಾಗಲಿ ನಗುತ ಒಲಿಯುವ, ಒಲಿಸುವ, ಹಾಡಿನಲಿಯುವ, ನಲಿಸುವ ಬದುಕು ಕನ್ನಡ ಮಕ್ಕಳದಾಗಲಿ ಎಂದು ಆಶಿಸಿ ಬೇಂದ್ರೆ ಮಕ್ಕಳ ಕವನ ರಚಿಸಿದರು. ಮಕ್ಕಳು 'ಚಳಿ ಇರಲಿ ಮಳೆ ಬರಲಿ' ಎಂದು ಕುಣಿದು ಹಾಡುವಾಗ ಹಾಡಿ ನಲಿಯುವಾಗ ಅವರು ಆನಂದ ಪಡೆದು ತಮ್ಮ ತಂದೆತಾಯಿಗಳಿಗೆ ಜೀವದಾನಂದ ನೀಡುವ ವಿಶಿಷ್ಟ ಕವನ ಇದಾಗಿದೆ.

ಚಳಿ ಇರಲಿ ಮಳೆ ಬರಲಿ
ಮಂಜು ಸುರಿಯುತಲಿರಲಿ
ಬಿಸಿಲು ಕುದಿಸುತಲಿರಲಿ
ಮುಮ್ಮುಖದ ಋತುಮಾನ ಹೇಗು ಇರಲಿss
ನಗುತ ಒಲಿವೆವು ನಾವು
ನಗುತ ಒಲಿಸುವೆವುsss

ಏನೆ ಕಷ್ಟವು ಬರಲಿ; ಎಂಥ ನಷ್ಟವೆ ಇರಲಿ
ಇಷ್ಟವು ಅನಿಷ್ಟವೂ ಕೂಡಿ ಬರಲಿss
ದುಮ್ಮಾನ ಕಳೆವಂತೆ ಸುಮ್ಮಾನ ಹೊಳೆವಂತೆ
ಹಾಡಿ ನಲಿವೆವು ನಾವು
ಹಾಡಿ ನಲಿಸುವೆವುsss

ತೇಲಾಡುವಾಗ ಮನಸು :

ತೇಲಾಡುವಾಗ ಮನಸು
ಮೇಲಾಡತಾವ ಕನಸು

ತಾಕಾಡುವಾಗ ಇತ್ತ
ತೇಕಾಡತಾವ ಚಿತ್ತ ('ತೇಲಾಡುವಾಗ' : ಗಂಗಾವತರಣ)

ಈ ಹಾಡಿನ ಲಯದಲ್ಲಿನ ಮೊದಲೆರಡುಸಾಲು ಅರ್ಥವಾಯ್ತುಎನ್ನುವಾಗ್ಗೆ ಮಿಕ್ಕೆರಡು ಸಾಲು ನೀನು ಬೆಳೆದಂತೆ ನಾನು ಅರ್ಥ ಆಗ್ತೀನಿ ಎಂದು ಹೇಳಿ ಹಾಡಿನ ಸಾಲನ್ನು ಗುನುಗುನಿಸುವಂತೆ ಮಾಡುತ್ತದೆ. ಮಕ್ಕಳು ಬೆಳೆದಂತೆ ಅವರ ಅನುಭವ ವಿಸ್ತಾರವಾದಂತೆ ಬೇಂದ್ರೆ ಕಾವ್ಯ ತನ್ನ ಗುಟ್ಟನ್ನು ರಟ್ಟು ಮಾಡುತ್ತ ಆನಂದಗಂಧಿಯಾಗುತ್ತದೆ. ಕವಿಯ ಎಲ್ಲ ಅನುಭವ, ಕನಸು ಕಾವ್ಯವಾಗುವುದಿಲ್ಲ. ಕವಿ ಪ್ರತಿಭೆ ಹಿಡಿಯುವುದು :

ಹಾಸಾದ ಮಿಂಚಿನಂದ
ಬೀಸಿದ್ದ ಸೆರಗಿನಿಂದ
ಸೆಳೆದಂತೆ ಎರಡುನೂಲು
ಉಳಿದಾವ ನಾಕುಸಾಲು

ಅವ್ವನ ಸೀರೆಯ ಸೆರಗು ಹಿಡಿದು ತಬ್ಬಿ ಬೆಚ್ಚಗೆ ಮಲಗಿದ ಮಗು, ಎದ್ದಾಗ ಅದರ ಕೈಲಿ ಉಳಿಯುವುದು ಎರಡುನೂಲು. ಅದರಂತೆ ಕವಿಯ ಅನುಭವ ಪಾಕಗೊಂಡು ಉಳಿಯುವುದು ನಾಕುಸಾಲು. ಈ ಸತ್ಯದಂತೆ ಮಕ್ಕಳು ಬೇಂದ್ರೆ ಕಾವ್ಯದ ಗುಂಗುಹಿಡಿದು ಹಾಡುತ್ತ ಸಾಗಿದರೆ, ಉಳಿವ ನಾಕು ಸಾಲು– ತೇಲಾಡುವ ಮನಸ್ಸಿನಲ್ಲಿ, ಮೇಲಾಡುವ ಕನಸಿನಲ್ಲಿ ಮುದವನ್ನು ಕೊಡುತ್ತದೆ. ಮುಂದೆಬರುವ ಕಷ್ಟಸುಖಗಳಲ್ಲಿ ಆತ್ಮೀಯ ದವನವಾಗುತ್ತದೆ.

**ಕುಣಿಯೋಣು ಬಾರ :** 'ಬಾಳು ಒಂದು ಕುಣಿತ. ತಿಳಿದುಹಾಕಿದ ಒಂದು ಹೆಜ್ಜೆಯೂ ನೃತ್ಯವಿಧಾನ' ಎಂದು 'ಗರಿ' ಸಂಕಲನದ 'ಕುಣಿಯೋಣು ಬಾರ' ಕವನದ ಭಾವಸಂದರ್ಭದಲ್ಲಿ ಕವಿ ಸೂಚಿಸಿದ್ದಾರೆ. ಇದು ಒಂದು ನಲ್ವಾಡು. ಇದು ಪ್ರೀತಿಯ ಹರ್ಷವನ್ನು ಜಗಕ್ಕೆ ಚಿಮ್ಮಿ ತಾನೂ ನಲಿವ ಕುಣಿತದಲಯ, ಭಾವದಬಾಗು, ಸೌಂದರ್ಯದ ಆಹ್ಲಾದ ಮುಪ್ಪುರಿಗೊಂಡ ಹಾಡು. ಈ ಹಾಡು ಮಕ್ಕಳನ್ನು ಕುಣಿಸಿದಂತೆ ಹಿರಿಯರನ್ನು ಹೆಜ್ಜೆಹಾಕಿ ಕುಣಿಯುವಂತೆ ಮಾಡುತ್ತದೆ. ಜಗದ ಬದುಕಿನ ಅರ್ಥವನ್ನು ತಿಳಿಸುತ್ತಾ ಕುಣಿಸುತ್ತದೆ.

ಕುಣಿಯೋಣು ಬಾರs
    ಕುಣಿಯೋಣು ಬಾ ॥ಪ॥

* * *

ತಿಣಿತಿಣಿಕಿ
    ಇಣಿಕಿಣಿಕಿ
        ಒಳಹೊರಗ ಹಣಿಹಣಿಕಿ
            ಸಾಕುತು ಸುಳ್ಳೆಣಿಕಿ । ಕುಣಿ

ಈ ಬದುಕು ಬರಿಭ್ರಮಿ
    ತಿಕಿದಿಮಿ ಗಿಮಿಗಿಮಿ
        ಹಾಂಗೊಮ್ಮಿ ಹಿಂಗೊಮ್ಮಿ । ಕುಣಿ

* * *

ನಾನಲ್ಲ
    ನೀನಲ್ಲ
        ನನ್ನಲ್ಲಿ ನೀನಿಲ್ಲ
            ಸಾವಿನ ನೋವಿಲ್ಲ। ಕುಣಿ

ಇದ್ದದ್ದು ಮರೆಯೋಣ
    ಇಲ್ಲದ್ದು ತೆರೆಯೋಣ
        ಹಾಲ್ಜೇನು ಸುರಿಯೋಣ । ಕುಣಿ

* * *

ತಾಳ್ಯಾಕ
    ತಂತ್ಯಾಕ
        ರಾಗದ ಚಿಂತ್ಯಾಕ
            ಹೆಜ್ಜ್ಯಾಕ ಗೆಜ್ಜ್ಯಾಕ । ಕುಣಿ

ಕುಲುಕಿಸಿ ಕೈಕೈ
ಮಲಕಿಸಿ ಮೈಮೈ
ಥಕಥಕ ಥೈ ಥೈ । ಕುಣಿ

* * *

ಚಕಚಕ
ಚಂಚಲ
ಮಿಂಚಿನ ಗೊಂಚಲ
ಚಕಮಕಿ ಚಲಮಲ ।ಕುಣಿ

* * *

ಗರಿಗರಿ
ಗಿರಿಗಿರಿ
ಹಿಗ್ಗಿಗ್ಗಿ ಹಿರಿಹಿರಿ
ಸೈ ಸೈ ಸರಿಸರಿ । ಕುಣಿ

ಹಗಲಿರಳತಾಳಕ್ಕ
ಮುಗಿಯದಕಾಳಕ್ಕ
ಜನುಮಗಳ ಮ್ಯಾಳಕ್ಕ । ಕುಣಿ

* * *

ಆ ಕ್ಷೀರ–
ಸಾಗರ–
ದಾನಂದದಾಗರ
ತೆರಿ ತೆರಿ ತೆರದರ । ಕುಣಿ

ಹದಿನಾಲ್ಕು ಲೋಕಕ್ಕ
ಚಿಮ್ಮಲಿ ಈ ಸುಖ
ಹಿಗ್ಗಲಿ ಸಿರಿಮುಖ । ಕುಣಿ

ಈ ಕುಣಿತದ ಆನಂದ ಹದಿನಾಲ್ಕು ಲೋಕಕ್ಕೆ ಚಿಮ್ಮಿ ಎಲ್ಲರ ಸಿರಿಮುಖ ಹಿಗ್ಗಲಿ ಎಂದು ಕವಿ ಬಯಸಿ ವಿಶ್ವದ ಜನರನ್ನು ಕುಣಿಸಿದ್ದಾರೆ. ಈ ಹಾಡಿನ ಬಗ್ಗೆ ತೀ.ನಂ.ಶ್ರೀ ಅವರು "ಇಲ್ಲಿ ಆನಂದವೇ ಸಂಸ್ಕಾರ, ಸಂಸ್ಕಾರವೇ ಆನಂದ. ಒಂದರೊಳಗೊಂದು ಲೀನವಾಗಿದೆ. ಇದು ಕಲೆಯ ಪರಮಾವಧಿ. 'ಕುಣಿಯೋಣು ಬಾರ' ವಿಶ್ವಸಾಹಿತ್ಯಕ್ಕೇ ಸೇರುವ ಕವನ" [೨೨] ಎಂದು ಹೇಳಿದ್ದಾರೆ.

**ಪ್ರಾರ್ಥನೆ :** ಬೇಂದ್ರೆಯವರು ಉಪನಿಷನ್ಮಂತ್ರದ ಛಾಯೆಯನ್ನೊಳಗೊಂಡ ಪ್ರಾರ್ಥನೆಗಳನ್ನು ರಚಿಸಿದ್ದಾರೆ. ಅವು ಜಾತಿಮತಪಂಥ ಹಾಗೂ ದೇಶದ ಗಡಿಗಳನ್ನು ಮೀರಿನಿಂತ ಮಾನವ ಕುಲದ ಪ್ರಾರ್ಥನೆಗಳಾಗಿವೆ. ಈ ಪ್ರಾರ್ಥನೆಗಳು ನಮ್ಮ ಕನ್ನಡನಾಡಿನ ಕಂದರ ನುಡಿಮಂತ್ರವಾಗಬೇಕಾಗಿದೆ.

ಲೇಸೆ ಕೇಳಿಸಲಿ ಕಿವಿಗೆ, ನಾಲಿಗೆಗೆ ಲೇಸೆ ನುಡಿದು ಬರಲಿ.
ಲೇಸೆ ಕಾಣಿಸಲಿ ಕಣ್ಗೆ, ಜಗದೊಳಗೆ ಲೇಸೆ ಹಬ್ಬುತಿರಲಿ.
ಲೇಸೆ ಕೈಗಳಿಂದಾಗುತಿರಲಿ, ತಾ ಬರಲಿ ಲೇಸು ನಡೆದು.
ಲೇಸನುಂಡು, ಲೇಸುಸಿರಿ, ಇಲ್ಲಿರಲಿ ಲೇಸೆಮೈಯ್ಯ ಪಡೆದು.

* * *

ಕೂಡಿ ಓದಿ ಕೂಡಾಡಿಕೂಡಿ, ಅರಿಯೋಣ ಕೂಡಿ ಕೂಡಿ
ಕೂಡಿ ತಿಂದು ಕೂಡುಂಡು ಕುಡಿದು ದುಡಿಯೋಣ ಕೂಡಿ ಕೂಡಿ
ಕೂಡಿ ನಡೆದು, ಒಡಗೂಡಿ ಪಡೆದು ನುಡಿ ಹೇಳಿ ಕೇಳಿ ಕೂಡಿ
ಕೂಡಿ ಬೆಳೆದು, ಬೆಳಗೋಣ ದೇವರೊಲು ಕೂಡಿ ಕೂಡಿ ಕೂಡಿ.

('ಪ್ರಾರ್ಥನೆ' : ಗಂಗಾವತರಣ)

**ಪಾತರಗಿತ್ತಿ :** 'ಪಾತರಗಿತ್ತಿ'ಯೆಂದರೆ ಚಿಟ್ಟೆ. ಚಿಟ್ಟೆ ಮಕ್ಕಳ ಮನಸ್ಸನ್ನು ಹಿಡಿದು ಓಡಾಡಿಸುವ, ಕೈಗೆ ಸಿಕ್ಕಂತೆ ಓಡುವ, ಸಿಕ್ಕು ನಲಿಸುವ ಚೆಲುವು. ಅದರ ಬಣ್ಣನೆಯ ಹಾಡು ಮಕ್ಕಳ ಬುದ್ಧಿಭಾವಗಳನ್ನು ಬೆಳೆಸುವ ಹಾಡಾಗಿದೆ.

ಪಾತರಗಿತ್ತೀ ಪಕ್ಕಾ
ನೋಡೀದೇನ್ಽ ಅಕ್ಕಾ!

ಹಸಿರು ಹಚ್ಚಿ ಚುಚ್ಚಿ
ಮೇಲ್ಕ ಕರಿಸಿಣ ಹಚ್ಚಿ,

ಹೊನ್ನ ಚಿಕ್ಕಿ ಚಿಕ್ಕಿ
ಇಟ್ಟು ಬೆಳ್ಳೀ ಅಕ್ಕಿ,

ಸುತ್ತೂ ಕುಂಕುಮದೆಳಿ
ಎಳೆದು ಕಾಡಿಗೆ ಸುಳಿ,

ಗಾಳೀ ಕೆನೀಲೇನ್ಕ
ಮಾಡಿದ್ದಾರ ತಾನ !

* * *

ಕಾಣದೆಲ್ಲೊ ಮೂಡಿ
ಬಂದು ಗಾಳಿಗೂಡಿ,

ಇನ್ನು ಎಲ್ಲಿಗೋಟ?
ನಂದನದ ತೋಟ ! (‘ಪಾತರಗಿತ್ತಿ ಪಕ್ಕ’:ಗರಿ)

ಕಾಣದೆಲ್ಲೊ ಮೂಡಿಬಂದು, ಗಾಳಿಗೂಡಿ ಹೋದ ಚಿಟ್ಟೆ ದೇವಲೋಕದ ನಂದನದ ತೋಟಕ್ಕೆ ಓಡಿಹೋಗುತ್ತಿದೆ ಎಂದು ಬಣ್ಣಿಸುತ್ತಾ ಕವಿವರ್ಯರು ಮಕ್ಕಳನ್ನು ನಂದನದ ತೋಟಕ್ಕೆ ಕೊಂಡೊಯ್ಯುತ್ತಾರೆ.

## ಮಾತೃಪ್ರಜ್ಞೆ

**ಅಂಬಿಕಾತನಯದತ್ತ :** ಬೇಂದ್ರೆಯವರಿಗೆ ತಾಯಿಯೇ ಸರ್ವಸ್ವ. ಅವರು ತಮ್ಮ ಕಾವ್ಯನಾಮವನ್ನು ತನ್ನ ತಾಯಿಯ ಹೆಸರಿನಲ್ಲಿಟ್ಟು ಕೊಂಡು ತಾಯಿಯ ಶ್ರೇಷ್ಠತೆಯನ್ನು ಮೆರೆದಿದ್ದಾರೆ. ಅವರು ‘ಅಂಬಿಕಾತನಯದತ್ತ’ ಎಂಬ ಕವನದಲ್ಲಿ ತಮ್ಮ ತಾಯಿಯನ್ನು ಕುರಿತು ‘ನಿನ್ನ ತನುವಿನಿಂದ ಬಂದ ಮುದ್ದು ತನಯ ನೀತನು । ನೀನು ಈಯಲಿತ್ತನು’ ಎಂದು ತನ್ನ ಸರ್ವವೂ ತಾಯಿಯದು ಎಂಬ ಸತ್ಯವನ್ನು ಕಾವ್ಯವಾಗಿಸಿದ್ದಾರೆ. ಅವರ ಕಾವ್ಯದ ಸ್ಥಾಯೀಭಾವ ಮಾತೃ ಪ್ರಜ್ಞೆಯಾಗಿದೆ.

ತಾಯೆ ಮಾಯೇ ಅಂಬಿಕೆಯೇ ! ನಿನ್ನ ತನಯದತ್ತನು ।
ನೀನು ಇತ್ತುದಿತ್ತನು
ನಿನ್ನ ಜನುಮದೊಂದು ಪಾಡು, ಹಾಡು ಆಗಿ ಮೂಡಿತು ।
ನನ್ನ ಕೊರಳು ಹಾಡಿತು
ಮೂರ್ತಿಗಾಗಿ ಮುಗಿದ ಕೈಯ್ಯು ಗುಡಿಗೆ ಸಲ್ಲುವಂತೆಯೇ ।
ಎರಡು ಒಂದೆಂಬಂತೆಯೇ
ಹಾಡಲಾಗಿ ಕವಿಯು ಎಂದು ಜನವು ನನ್ನ ಕರೆದಿದೆ ।
ನಿನ್ನ ಹೆಸರು ಮರೆಗಿದೆ
ನಿನ್ನ ಲಲ್ಲೆಯಲ್ಲಿ ಹುಟ್ಟಿ ಬೆಳೆದು ಬಂದ ಸೊಲ್ಲಿದು ।
ಬೇರೆ ಏನು ಬಲ್ಲದು
ನಿನ್ನ ಉದರದೊಂದ ಹೂವ ಸರಸ್ವತಿಗೆ ಸಲಿಸಿದೆ ।
ಚುಕ್ಕೆಯಾಗಿ ನೆಲೆಸಿದೆ
ಸಾವಿರದ ಮನೆಗಳಲ್ಲಿ ನನಗೆ ಮನೆಯ ಮಾಡಿದೆ ।
ತಾಯಿ ಆಟ ಹೂಡಿದೆ
ನಿನ್ನ ಹೆಸರಿನಲ್ಲಿ ನಾನು ಬರೆವುದೇನು ಸೋಜಿಗ ।
ತಿಳಿಯಲಾರದೀ ಜಗ

(‘ಅಂಬಿಕಾತನಯದತ್ತ’ : ಗಂಗಾವತರಣ)

ಅಂಬಿಕೆಯ ಉದರದ ಹೂ ದತ್ತಾತ್ರೇಯ. ಹಾಗೆಯೇ ತಾಯಿ ಅಂಬಿಕೆಯ ಹೆಸರನ್ನು ತನ್ನ ಕಾವ್ಯನಾಮವಾಗಿಸಿಕೊಂಡು ಆಕೆಯಿಂದ ಉದುರಿಹೋಗದ ಹೆಸರಾಗಿ ಸರಸ್ವತಿಗೆ ಸಲ್ಲಿಸಲ್ಪಟ್ಟವನು. ತಾಯಿಯ ವರದಿಂದ ಶ್ರೇಷ್ಠ ಕವಿಯಾಗಿ ಸಾಹಿತ್ಯಲೋಕದ ಶಾಶ್ವತಚುಕ್ಕೆಯಾಗಿ ನೆಲೆಸಿದವನು ಎಂದು ಕವಿ ‘ಅಂಬಿಕಾತನಯದತ್ತ’ನನ್ನು ಬೇಂದ್ರೆಯವರು ಬಣ್ಣಿಸಿ ಸಂತಸಪಟ್ಟಿದ್ದಾರೆ. ಈ ಕವನದಲ್ಲಿ ಅವರು ಶ್ಲೇಷೆಯ ಸುಂದರ, ಸಾರ್ಥಕ ಪ್ರಯೋಗವನ್ನು ಮಾಡಿದ್ದಾರೆ. ಮಾತೃಪ್ರಜ್ಞೆಯಲ್ಲಿ ಭಾವದ ಜೀಕಾಟದೊಡನೆ ತಾತ್ವಿಕತೆ, ದಾರ್ಶನಿಕತೆ ಮೇಳೈಸಿ ‘ಮೂರ್ತಿಗಾಗಿ ಮುಗಿದ ಕೈಯ್ಯುಗುಡಿಗೆ

ಸಲ್ಲುವಂತೆಯೇ। ಎರಡು ಒಂದೆಂಬಂತೆಯೆ' ಎಂಬ ಭಾವತನ್ಮಯತೆ ಹೊಂದಿದ್ದಾರೆ. ತನ್ನ ತಾಯಿಯನ್ನು ಸ್ತುತಿಸಲು ಎದೆ ಸಾಲದು. 'ಹೆಣ್ಣು ಎನ್ನುವ ಮಾತು ತಾಯಿ ಎನ್ನುವ ಮಾತು ಎರಡಲ್ಲ ಒಂದು' ಎಂಬ ಅಮೋಘ ಚಿಂತನೆಯನ್ನು ನೀಡಿದವಳು ತಾಯಿ ಅಂಬವ್ವ ಎಂದು ಸ್ತುತಿಸಿದ್ದಾರೆ.

ಆ ತಾಯಿ ಮಾತಾಯಿ ಈ ಬಾಯಿ ತುತ್ತಲ್ಲ
ಅವಳನ್ನು ಸ್ತುತಿಸಲು ಎದೆ ಸಾಲದು
ಮೌನದಲ್ಲಿರುವದು ಧರ್ಮಕ್ಕೆ ಹೊರತೆಂದು
ಎದೆ ಮಾತು ಸಾಲಾಗಿ ಉಸಿರುವೆನು.
ಹೆಣ್ಣು ಎನ್ನುವ ಮಾತು ತಾಯಿ ಎನ್ನುವ ಮಾತು
ಎರಡಲ್ಲ ಒಂದೆಂದು ತಿಳಿಸಿದಳು.
ಆ ಬಸಿರೆ ಬ್ರಹ್ಮಾಂಡ, ಹೆಸರಿಗೆ ಪಿಂಡಾಂಡ,
ಕುಸುರೀಗೆ ಬೆಲೆ ಎಂದು ಕಲಿಸಿದಳು.

('ಬಾಲ್ಯಕಾಂಡ' : ಮತ್ತೆ ಶ್ರಾವಣಬಂತು)

**ಒಡಲೆರಡು ಜೀವವೊಂದು :** 'ತಾಯಿಯ ಮೈಯು ಕೆಲಸದಲ್ಲಿ ತೊಡಗಿದಾಗಲೂ, ಜೀವ ಕೂಸಿನಲ್ಲಿರುತ್ತದೆ. 'ಒಡಲೆರಡು ಜೀವವೊಂದು' ಎಂಬ ಈ ಕರುಣ ಮಧುರಾನುಭವವನ್ನು ತಾಯಿಯಂತೆ ಕಂಡವರಾರು? ಎಂಬ ಭಾವಸಂದರ್ಭ ಹೊಂದಿದ 'ತಾಯಿ-ಕೂಸು' ಕವನದಲ್ಲಿ ತಾಯಿಯ ವಾತ್ಸಲ್ಯದ ಅಮರತೆ ಚಿತ್ರಿತವಾಗಿದೆ :

ಕೆಲಸದಲಿ ಬಿಡುವಿಲ್ಲ
ಕೂಸಿನಲಿ ಮನವೆಲ್ಲ
ತಾಯಿ ಯೋಗಿನಿ ಮೈಲಿ ದುಡಿಯುತಿಹಳು
ತನ್ನೆದೆಯ ತೊಟ್ಟಿಲಲಿ
ಕಂದನನು ಇಟ್ಟಲ್ಲಿ
ಕಂಠದಲಿ ಜೋಗುಳವ ನುಡಿಸುತಿಹಳು.

ಎಂದು ತನ್ನ ಎದೆಯ ತೊಟ್ಟಿಲಲ್ಲಿ ಕಂದನನ್ನು ಇಟ್ಟುಕೊಂಡು ಕಂಠದಲ್ಲಿ ಜೋಗುಳವನ್ನು ಗುನುಗುನಿಸುವ ಮನುಕುಲದ ದೇವತೆಯ ಚಿತ್ರವನ್ನು ನೀಡುತ್ತಾರೆ. ತಾಯಿ ಯೋಗಿನಿಯ ತಪವನ್ನು ಕಾವ್ಯವಾಗಿಸಿದ್ದಾರೆ.

**ಧಾರವಾಡದ ತಾಯಿ :** ಬೇಂದ್ರೆಯವರು ಧಾರವಾಡದ ತಾಯಿ ದುರ್ಗಾದೇವಿಗೆ ಗೌರವದ ನಮನಗಳನ್ನು ಸಲ್ಲಿಸುತ್ತ, ತಾಯೇ, ನೀನೆ ನನಗೆ ಆಧಾರ. ನನಗೆ ನೀನಲ್ಲದೆ ಬೇರೆ ಇಲ್ಲ. ಈ ಕಾಮ ಮೆತ್ತಿದ ಬತ್ತಿದ ಮನಕೆ ಪ್ರೇಮವಾಹಿನಿ ನೀ ಹರಿಯದೆ ತಾಮಸ ಹರಿಯದು; ನನ್ನ ಹೃದಯ ಕಡೀ, ತಾಯಿ ಎನ್ನ ಹೃದಯ ಕಡೀ ಎಂದು ಪ್ರಾರ್ಥಿಸಿದ್ದಾರೆ.

ನಿನ್ನ ಕಣ್ಣ-ಕಡೆಗೋಲಿಂದ
ನನ್ನ ಹೃದಯ ಕಡಿಯೇ ತಾಯಿ
ಎನ್ನ ಹೃದಯ ಕಡೀ....
ಬೆಣ್ಣೆ ಮೇಲೆ ತೇಲಿಸಿ ತಂದು
ನನ್ನ ಬಾಯ್ಗೆಹಿಡೀ
ನೀನೆ ಬಾಯ್ಗೆ ಹಿಡೀಯೆ ತಾಯಿ ॥ಪಲ್ಲ॥

ಧಾರವಾಡದ ತಾಯೇ । ನನಗಾ । ಧಾರ ನಿನ್ನದಲ್ಲದಿಲ್ಲ
ಭಾರ ನಿನ್ನ ಮೇಲೆಇರಲು । ಯಾರಿಗಾರು ಎಂಬರೇನೇ?
ಎನ್ನ ಹೃದಯ ಕಡೀ
ಕಾಮ ಮೆತ್ತಿ ಬತ್ತಿದ ಮನಕೆ । ನೇಮ ನಿತ್ಯ ಬಂತೆಲ್ಲಿಂದ
ಪ್ರೇಮವಾಹಿನಿ ನೀ ಹರಿಯದಲೆ । ತಾಮಸ ತಾ ಹರಿದೀತೇನೇ ?
ಎನ್ನ ಹೃದಯ ಕಡೀ
('ಧಾರವಾಡದ ತಾಯಿ' : ಸಖೀಗೀತ)

**ಇಳಿದು ಬಾ ತಾಯಿ :** 'ಗಂಗಾವತರಣ' ಕವನದಲ್ಲಿ ತಾಯಿ ಗಂಗೆಯನ್ನು 'ಇಳಿದು ಬಾ ತಾಯಿ, ಇಳಿದು ಬಾ' ಎಂದು ಬೇಂದ್ರೆಯವರು ಪ್ರಾರ್ಥಿಸಿದ್ದಾರೆ. ಸ್ವರ್ಗತೊರೆದು ನೆಲದಿ ಹರಿದು ಬಾ, ಕೊಳೆಯ ತೊಳೆಯಲು, ಸತ್ತ ಜನರನ್ನು ಎತ್ತಲು, ಬಾಳು ಬೆಳಕಾಗಿಸಲು ಬೆಳೆದು ಬಾ ಎಂದು ತಾಯಿ

ಗಂಗೆಯನ್ನು ಕರೆದಿದ್ದಾರೆ. ಬುದ್ಧಿಗಿಂತ ಹೃದಯವನ್ನು ಹೆಚ್ಚಾಗಿ ಅನುಸರಿಸಿ, ಮಾತಿನ ಮಥನದಿಂದ ನಾದದ ನವನೀತವಾದ 'ಇಳಿದು ಬಾ ತಾಯಿ' ಯನ್ನು ನೀಡಿದ್ದಾರೆ. ಈ ಕವನದ ತೀವ್ರಭಾವದ ಓಟದಲ್ಲಿ; ಭಾಷೆ, ಶಬ್ದ, ಲಯ, ಗತಿ, ಛಂದ ತಾನೇ ರೂಪುಗೊಂಡು ಓಡುತ್ತ ಭಾವಕ್ಕೆ ಸಮಸ್ಪಂದಿ ಯಾಗಿ ಸಹೃದಯನನ್ನು ತನ್ನತ್ತ ಸೆಳೆದುಕೊಂಡು ಅವನನ್ನು ಹಿಗ್ಗಿಸುತ್ತ ಸಾಗುತ್ತದೆ. 'ಇಳಿದು ಬಾ ತಾಯಿ' ರಸಗಂಗಾವತರಣವಾಗಿ ನಿರರ್ಗಳತೆಯ ರಸಧಾರೆಯಾಗಿದೆ. ಈ ಕವನದಲ್ಲಿ ಉಪಾಸಕ ಕವಿಯಾದ ಬೇಂದ್ರೆಯವರು ತನ್ನ ನುಡಿಯ ಸಸಿ ಮೊಳೆಸಿ ಹಿಗ್ಗಿಬಾ ಎಂದು ಕಾವ್ಯಚೇತನ ಶ್ರೀಗಂಗೆಯನ್ನು ಪ್ರಾರ್ಥಿಸಿದ್ದಾರೆ.

ಇಳಿದು ಬಾ ತಾಯಿ
    ಇಳಿದು ಬಾ ॥ ಪ ॥

* * *

ನನ್ನ ತಲೆಯೊಳಗೆ
ನನ್ನ ಬೆಂಬಳಿಗೆ
ನನ್ನ ಒಳ ಕೆಳಗೆ
    ನುಗ್ಗಿ ಬಾ,
ಕಣ್ಣ ಕಣ ತೊಳಿಸಿ
ಉಸಿರ ಎಳೆ ಎಳಸಿ
ನುಡಿಯ ಸಸಿ ಮೊಳೆಸಿ
    ಹಿಗ್ಗಿ ಬಾ;
ಎದೆಯ ನೆಲೆಯಲ್ಲಿ ನೆಲಿಸಿ ಬಾ
ಜೀವ ಜಲದಲ್ಲಿ ಚಲಿಸಿ ಬಾ
ಮೂಲ ಹೊಲದಲ್ಲಿ ನೆಲಿಸಿ ಬಾ
    ಇಳಿದು ಬಾ ತಾಯಿ
        ಇಳಿದು ಬಾ.

**ಭೂಮಿತಾಯಿ :** ಬೇಂದ್ರೆಯವರು ಭೂಮಿತಾಯಿಯನ್ನು 'ಚಿಗರಿಗಂಗಳ ಚೆಲುವಿ' ಎಂದು ಕರೆದಿದ್ದಾರೆ. ಆ ತಾಯಿ, ಈ ಕ್ರೂರ ಮಾನವನು ಪೃಥ್ವಿಯ ಮೇಲೆ ನಡೆಸುವ ಹಿಂಸೆಯನ್ನು ಕಂಡು ನೊಂದು-ತಾನು ಒಡವೆಅಲ್ಲ ಮಗನೆ, ಉಸಿರಿದ್ದೊಡಲು ಎಂದು ಹೇಳಿ-ಹಾಡೆ ಹಗಲು ಎಂಥಾ ಜೀವದ ಬ್ಯಾಟೆ ನಡೆಸುತ್ತಿರುವೆ, ಇದು ಸರಿಯಲ್ಲ. ನೀನು ಹಾಳಾಗುವೆ ಜೊತೆಗೆ ಎಲ್ಲವನ್ನೂ ಹಾಳು ಮಾಡುವೆ ಎಂದು ನೊಂದು ನುಡಿಯುತ್ತಿದ್ದಾಳೆ. ಬೇಂದ್ರೆಯವರು ಭೂಮಿ ತಾಯಿಯನ್ನು 'ಚಿಗರಿಗಂಗಳ ಚೆಲುವಿ' ಎಂದು ಕರೆದಿರುವುದರಲ್ಲಿ ಜೀವನ ಸಂಕೇತವಿದೆ. ನಮ್ಮ ಭೂಮಿ ಜೀವನದ ಸುಖ ಸಂತೋಷ, ನೆಲೆ ಬೆಲೆ ಪೃಥ್ವಿಯಿಂದ ಎಂಬ ಭಾವ ಕಾವ್ಯವಾಗಿ ಹರಿದಿದೆ. ಇಲ್ಲಿ ಕವಿ ಹೃದಯ ವಿಶ್ವಮಾತೆಯ ಎದೆಯ ನೋವಾಗಿದೆ.

ಚಿಗರಿಗಂಗಳ ಚೆಲುವಿ ಚೆದರಿ ನಿಂತಾಳ ನೋಡೋ
ಬೆದ್ವರಿ ನಿಂತಾಳ ॥ ಪಲ್ಲ ॥

* * *

ಬ್ಯಾಟಿ ನಾಯೊದರ್ಯಾವೊ
ಹಸುಜೀವ ಬೆದರ್ಯಾವೋ
ಗಳಗಳನೆ ಗಿಡದೇಲಿ ಉದರ್ಯಾವೋ
ಗೆಣೆಯ ಉದರ್ಯಾವ್ವ
ದಿನ್ನಿ ಮಡ್ಡಿ ಗುಡ್ಡ ಅದರ್ಯಾವ;
ಅದನ ತಾ ಕಂಡು ನೊಂದ್ವಾಳೊ
ಬೆಂದ್ವಾಳೊ
ಅಂದ್ವಾಳೊ
ಇದು ಎಂಥಾ ಜೀವದ ಬ್ಯಾಟಿ ಹಾಡೆ ಹಗಲು ॥ ಚಿಗರಿಗಂಗಳ

('ಚಿಗರಿಗಂಗಳ ಚೆಲುವಿ' : ಸಖೀಗೀತ)

**ಕರುಳಿನ ವಚನಗಳು :** ಬೇಂದ್ರೆಯವರು ವಾತ್ಸಲ್ಯಮಯಿ. ಅವರು ಮಕ್ಕಳ ನಗು-ಅಳು, ಆಟ-ಪಾಠ, ಕುಣಿತ-ಮೆರೆತ, ಮುದ್ದು-ಮಾಟದ ರಹಸ್ಯ

ಅರಿತವರು. ಜೀವನದ ನಿಜ ಸಂತೋಷವಾದ ವಾತ್ಸಲ್ಯದಲ್ಲಿ ಮಿಂದವರು. ಅವರು ಅಮೂರ್ತ, ಅಲೌಕಿಕ, ವಾತ್ಸಲ್ಯಭಾವವನ್ನು ಹೃದಯ ಸ್ಪರ್ಶಿಯಾದ ಶಾಂತ ಸತ್ಯ ನೆಲೆಯಲ್ಲಿ ಅನುಭವಿಸಿ; ಅದಕ್ಕೆ ಮೂರ್ತ ರೂಪ ನೀಡಿ ಸಹೃದಯನ ಮನಸ್ಸನ್ನು ಸೂರೆಗೊಂಡವರು. 'ಕರುಳಿನ ವಚನಗಳು' ವಾತ್ಸಲ್ಯದ ಜೀವಭಾವದ ಕವನಗಳಾದಂತೆ; ಬೇಂದ್ರೆ ಕನ್ನಡಕಾವ್ಯ ಪರಂಪರೆಯ ಕರುಳಬಳ್ಳಿಯಾಗಿ ನುಡಿವ ನುಡಿಯಾಗಿಯೂ ಸೂಚಿತವಾದ ಧ್ವನಿಯನ್ನು ಒಳಗೊಂಡಿದೆ. ಕರುಳಿನ ವಚನದಲ್ಲಿ ವಚನಕಾರರ ವಚನ ಕೌಶಲ, ದಾಸಶ್ರೇಷ್ಠರ ಪದ ಜಾಣ್ಮೆಯಿದೆ. ವಾತ್ಸಲ್ಯದ ಬೆಲ್ಲದಚ್ಚಿನ ಸಿಹಿಯಿದೆ;

ನನ್ನ ಬೆಲ್ಲದಚ್ಚಿನ ಬೊಂಬೆಯೆ
ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ.
ನೀನು ನಗುತ್ತಲೆ ನಾನು ನಿನ್ನವಳೆಂದೆನಿಸುವುದು.
ನೀನು ಅಳುತ್ತಲೆ ನೀನು ನನ್ನವನೆಂದೆನಿಸುವುದು.
ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ.

('ನಗು–ಅಳು' : ಉಯ್ಯಾಲೆ)

* * *

ಎಳೆಬಾಳೆಯ ಸುಳಿಯೆಲೆಗಿಂತಲೂ
ತೆಳುವಾದ ನಿನ್ನ ಮೈದೊಗಲ ನೋಡುತ್ತಲೆ
ಕಾಣುವುದು – ನೇಕಾರರ ನಯದಕಣ್–ನೆಲೆ.

('ರಹಸ್ಯ' : ಉಯ್ಯಾಲೆ)

**ಕಳಲಿದ್ದಾಗಲೇ ಕಡಿದ ಕಾಳ ! :** ಕರುಳಿನ ವಚನಗಳಲ್ಲಿನ ಕವಿಯ ಮನದ ಭಾವವೆಲ್ಲ ಮಿಡಿಯಾಗಿ ಕಂಪಸೂಸಿ, ಶಬ್ದ ಶಬ್ದ ನಾದದಲೆಯಲ್ಲಿ ತೂಗಿ, ವಾತ್ಸಲ್ಯದರ್ಶನ ನೀಡುತ್ತದೆ. ಜೊತೆಜೊತೆಗೆ ವಾತ್ಸಲ್ಯಗೀತದ ಹಿಂದೆ ಜೀವ ಕುಲುಮೆಯ ತಿದಿಯಲ್ಲಿ ಕಾದ ಜೀವದ ಕಾವು, ನೋವು ಸಿಡಿದ ಕಿಡಿಯೂ ಇದೆ. ಆರುಜನ ಮಕ್ಕಳನ್ನು ಕಳೆದುಕೊಂಡು ನೋವುನುಂಗಿದ ಕವಿ, ತನ್ನ

ಮಗ ಕ್ಷೇಮೇಂದ್ರನು ಮರಣಹೊಂದಿದಾಗ ನುಡಿದ ನುಡಿ ಅಪೂರ್ವ ವಾತ್ಸಲ್ಯಗೀತವಾಗಿದೆ :

ಕೊಳಲಾಗಬಹುದಾಗಿತ್ತು, ಕಳಲಿದ್ದಾಗಲೇ ಕಡಿದ ಕಾಳ!
ದೇವ! ಮಗುವೆಂದು ತಿಳಿದಿದ್ದೆ ಅದಾಯಿತು ನೀರ್ಗುಳ್ಳಿ !
ಮನೆಯವನೆಂದು ತಿಳಿದಿದ್ದೆ ಅವನಾದ ಅತಿಥಿ !
ಕಣ್ತುಂಬ ಕಾಣಲಿಲ್ಲ; ಬಾಯ್ತುಂಬ ಮುದ್ದಿಡಲಿಲ್ಲ;
ಮನೆಯ ಮಮತೆಯ ಮೂರ್ತಿಯಾದೀತೆಂದಿದ್ದೆ-
ಆದರೆ-ಎಂಜಲುಮಾಡಿದ್ದಿಲ್ಲ ! ಆಯ್ತು-ಮಸಣದ-
ಮಹಾದೇವನ ಮುಡಿಯೊಳಗಿನ ಮೀಸಲ ಮದಗುಣಿಕಿ.

('ಅರ್ಪಣ-ತರ್ಪಣ'-ಉಯ್ಯಾಲೆ)

**ಅರ್ಧನಾರಿ – ನಟೇಶ್ವರ :** ಹಣ್ಣಿನವಾತ್ಸಲ್ಯ ಕಂದನಾಗಿ ರೂಪುಗೊಂಡಂತೆ, ಬೇಂದ್ರೆಯವರ ವಾತ್ಸಲ್ಯ ಕರುಳಿನ ವಚನವಾಗಿದೆ. ಅವರು 'ಅರ್ಧನಾರಿ-ನಟೇಶ್ವರ' ಕವನದಲ್ಲಿ ಮಗುವಿನಲ್ಲಿ ಅರ್ಧನಾರಿ-ನಟೇಶ್ವರ ಗುಣಗಳನ್ನು ಕಾಣುತ್ತ, ನಿಜವನ್ನು ಬಣ್ಣಿಸುತ್ತ, ನಿಜದನೆಲೆಯಿಂದ ತಾತ್ವಿಕಚಿಂತನೆಯತ್ತ ಸಾಗಿದ್ದಾರೆ :

ಕಂದಾ ! ನಿನ್ನ ಮುಖದ ಮುದ್ರಾಕೃತಿಯು ನನ್ನಂತಿದೆ;
ಆದರೆ ದೇಹದ ಭದ್ರಾಕೃತಿಯು ಅವರಂತಿದೆ.
ಕಂದಾ ! ನಿನ್ನ ಕಣ್ಣೊಳಗಿನ ಕರುಣೆ ನನ್ನಂತಿದೆ;
ಆದರೆ ನೋಟದೊಳಗಿನ ಸರಣಿ ಅವರಂತಿದೆ.

* * *

ಅಹಹ! ಹುಟ್ಟಾ ಗೆಲ್ಲ ಬಲ್ಲ ಸೋಲದ ಸೊಬಗುಗಾರ !
ಗಂಡುಗಾಡಿಯಲ್ಲಿ ಹೆಣ್ಣು ಮೋಡಿ ಬೆರೆತು
ಅರ್ಧನಾರಿ-ನಟೇಶ್ವರನ ಅಭಿನವ ಸೃಷ್ಟಿಯಾದೆಯಲ್ಲ !

('ಅರ್ಧನಾರಿ-ನಟೇಶ್ವರ' : ಉಯ್ಯಾಲೆ)

**ನನ್ನ ಕಂದನೂದುವ ಅವಳಿ ಶಂಖಗಳಿವು :** ನಿರ್ಮಲಾಂತಃಕರಣದ ವಾತ್ಸಲ್ಯಮಯಿಯಾದ ಬೇಂದ್ರೆಯವರು, ಕನ್ನಡಸಾಹಿತ್ಯ ಪರಂಪರೆಯಲ್ಲಿಯೇ ಅಪೂರ್ವವಾದ ತಾಯಿಯ ಮೊಲೆಯನ್ನು ಬಣ್ಣನೆ ಮಾಡುತ್ತ; ಆ ಪವಿತ್ರ ಮೊಲೆಯನ್ನು ಹಲವು ರೂಪಕಗಳಲ್ಲಿ ವಾತ್ಸಲ್ಯರಸವಾಗಿ ಹರಿಸಿರುವುದು ಅವರ ವಿಶ್ವದೌನ್ನತ್ಯಭಾವಕ್ಕೆ ಸಾಕ್ಷಿಯಾಗಿದೆ. ವಾತ್ಸಲ್ಯದ ವಿಜಯಯಾತ್ರೆಯಲ್ಲಿ ನನ್ನ ಕಂದನೂದುವ ಅವಳಿ ಶಂಖಗಳಿವು ಎಂದಿದ್ದಾರೆ :

ನನ್ನ ಬಾಲಗೋಪಾಲನ ಗೋದಲೆಗಳವ್ವಾ ಇವು;
ಕಪಿಲೆ ಕಾಮಧೇನುಗಳು ಕಟ್ಟಿಹವಿಲಿ.
ಅವನಿಗೇನು ಕಡಿಮೆ?

ಗಂಗೆಗೆ ಉಣಿಸುವ ಹಿಮವತಿಯ
ತುಂಗ ಶಿಖರದ ಮಾದರಿಗಳಿವು.
ಅವನಿಗೇನು ಕಡಿಮೆ?

ವಾತ್ಸಲ್ಯದ ವಿಜಯಯಾತ್ರೆಯಲ್ಲಿ
ನನ್ನ ಕಂದನೂದುವ ಅವಳಿ ಶಂಖಗಳಿವು.
ಅವನಿಗೇನು ಕಡಿಮೆ?

('ಮೊಲೆ' : ಉಯ್ಯಾಲೆ)

**ನನ್ನ ಮಾನಸದ ಮದಗವೆ :** ಕರುಳಿನ ವಚನಗಳ 'ಅಲೌಕಿಕ' ಕವನದಲ್ಲಿ ಬೇಂದ್ರೆಯವರು ಮಗುವನ್ನು 'ನನ್ನ ಪಂಕದಲ್ಲಿ ಹುಟ್ಟಿ ಲೇಪವಿಲ್ಲದಿರುವೆ ನನ್ನ ಪಂಕಜವೆ ! ನನ್ನ ನೀರಲ್ಲಿ ಬೆಳೆದು ನೀರಾಳದಲ್ಲಿರುವೆ, ನನ್ನ ನೀರಜವೆ!' ಎಂದು ಅದರ ಅಲೌಕಿಕತೆಯನ್ನು ವರ್ಣಿಸಿದ್ದಾರೆ. ಆ ಮಗುವನ್ನು ಒಡೆಯಲು ಬಾರದ ಒಡಪು, ಬಿಡಿಸಲು ಬಾರದ ತೊಡಕು ಎಂದು ಹೇಳುತ್ತಾ 'ನನ್ನ ಮಾನಸದ ಮದಗವೆ' ಎಂದಿದ್ದಾರೆ. ಇದು ತಾಯಿ ತನ್ನ ಮಗುವನ್ನು ಕುರಿತು ವ್ಯಕ್ತಪಡಿಸಿದ ಬೇಂದ್ರೆ ಪ್ರತಿಭೆಯ ಅಪೂರ್ವರೂಪಕವಾಗಿದೆ. ಮದಗ ಎಂದರೆ ಕೆರೆತುಂಬಿ ಹರಿದು ಹೊರಚೆಲ್ಲಿದ ತೂಬಿನ ನೀರು. 'ನನ್ನ ಮಾನಸದ ಮದಗವೆ' ಎಂದಾಗ ತಾಯಿ ತನ್ನ ಮಗುವನ್ನು ಕುರಿತು, ತನ್ನ ಮನ ಹಾಗೂ ಜೀವತುಂಬಿ ಹರಿದಭಾವ ವ್ಯಕ್ತವಾಗಿದೆ. ಅವಳ ಚೇತನವಾದ,

ಅವಳ ರೂಹುಆದ, ಅವಳ ಜೀವದ ಭಾಗವಾದ ಅವಳ ಒಡಲಿನಿಂದ ಹೊರಬಂದ, ಅವಳೇ ಆದ ಮದಗ ಅದು :

ನನ್ನ ಮಾನಸದ ಮದಗವೆ
ಮುಳುಗಿ ನೊಡಿದೆ, ಮುದ್ದಿಸಿ ನೋಡಿದೆ,
ಮೂಸಿ ನೋಡಿದೆ,
ಮುಟ್ಟಿ ನೋಡಿದೆ, ದಿಟ್ಟಿಸಿ ನೋಡಿದೆ,
ನಿನ್ನಳವು ಅಸದಳವು.

('ಅಲೌಕಿಕ' : ಉಯ್ಯಾಲೆ)

ಹೀಗೆ ಬೇಂದ್ರೆ ರೂಪಕ ಚಕ್ರವರ್ತಿಯಾಗಿ ಕನ್ನಡಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ.

**ಜೀವಂತ ಮಮತೆ ನಾನು :** ಬೇಂದ್ರೆಯವರು 'ನಾನು' ಎಂಬ ಕವನದಲ್ಲಿ ವಿಶ್ವಮಾತೆಯ, ಭೂಮಿ ತಾಯಿಯ, ಭರತಮಾತೆಯ, ಕನ್ನಡದ ತಾಯಿಯ, ತಾಯಿ ಅಂಬಿಕೆಯ ಒಟ್ಟು ಐದು ಐದೆಯರ ಮಗ ತಾನು ಎಂದು ಹೇಳಿ ಕೊಂಡಿದ್ದಾರೆ :

ಈ ಐದು ಐದೆಯರೆ ಪ್ರಾಣಗಳಾಗಿ
ಈ ಜೀವ ದೇಹನಿಹನು
ಹೃದಯಾರವಿಂದದಲ್ಲಿರುವ ನಾರಾಯಣನೆ
ತಾನಾಗಿ ದತ್ತನರನು
ವಿಶ್ವದೊಳನುಡಿಯಾಗಿ ಕನ್ನಡಿಸುತಿಹನಿಲ್ಲಿ
ಅಂಬಿಕಾತನಯನಿವನು.

ಎಂದು 'ಅಂಬಿಕಾತನಯ' ವಿಶ್ವದೊಳನುಡಿಯಾಗಿ ಕನ್ನಡಿಸುತಿಹುದನ್ನು ಸಾರಿದ್ದಾರೆ. ಈ 'ಅಂಬಿಕಾತನಯ' ಮುದ್ರಿಕೆ ಕುರಿತು ವಾಮನಬೇಂದ್ರೆ ಯವರು "ಅಂಬಿಕಾತನಯದತ್ತ ಮುದ್ರಿಕೆ ಇರುವ ಕವನಗಳು ಕೇವಲ ೩೦ ರಷ್ಟು. ಕವನರಚನೆಯಲ್ಲಿ ವಿಶಿಷ್ಟ ಅನುಭಾವ ಬಂದಾಗ ಮಾತ್ರ ಮುದ್ರಿಕೆ ಹಾಕುವುದು

ಬೇಂದ್ರೆಯವರ ರೂಢಿ. ಮುದ್ರಿಕೆಯ ಕವನಗಳ ಆಧಾರದ ಮೇಲಿಂದ ಅವರ ಕವನರಚನೆಗಳಲ್ಲಿಯ ತಿರುವುಗಳನ್ನು, ಬೆಳವಣಿಗೆಯನ್ನು ಗುರುತಿಸಲು ಬರುತ್ತದೆ”[೧೩] ಎಂದು ತಿಳಿಸಿದ್ದಾರೆ. ಅದು ಅವರ ಅಂಕಿತನಾಮವೂ ಆಗಿದೆ.

**ಮೈಗೊಟ್ಟ ತಾಯಿಯು ಮೈಬಿಟ್ಟು ಹೋಗುವಳೆ ?** : ಬೇಂದ್ರೆಯವರು ತಾಯಿ ಅಂಬವ್ವ ತೀರಿಕೊಂಡಾಗ ತನ್ನ ತಿಳುವಳಿಕೆಯಂಥ ತಿಳಿಗೇಡಿತನಕ್ಕೆ ವ್ಯಥೆಪಟ್ಟಿದ್ದಾರೆ :

ತಿಳುವಳಿಕೆಯಂಥ ತಿಳಿಗೇಡಿ ಎಲ್ಲಿಯೂ ಇಲ್ಲ!
ಕಳಕೊಂಡ ಹೊರತು ಬೆಲೆಯರಿಯದದು ಫಲವಿಲ್ಲ ॥

(‘ನಲ್ ತಾಯಿ’ : ಅರಳು ಮರಳು)

ಅಂಬಿಕೆಯನ್ನು ಕಳೆದುಕೊಂಡು ಉದರದ ಹೂವಾಗಿ ಉಳಿದ ಬೇಂದ್ರೆಯ ವರು ‘ಮೈಗೊಟ್ಟ ತಾಯಿಯು ಮೈಬಿಟ್ಟು ಹೋಗುವಳೆ?’ ಎಂಬ ಪ್ರಶ್ನೆ ಯೊಡನೆ ತಾಯಿಯ ಅನಂತತೆಯ ಸತ್ಯದರ್ಶನವನ್ನು ನೀಡಿದ್ದಾರೆ.

ಮೈಗೊಟ್ಟ ತಾಯಿಯು ಮೈಬಿಟ್ಟು ಹೋಗುವಳೆ ?
    ಏನೇನೊ ಎಂದೆಂದು ನಾನತ್ತೆನು.
ಮೈಮರೆತು, ಮೈಅರಿತು, ಮೈಬೆವೆತು, ಮನಬೆವತು
    ಕಣ್ಣೀರಧಾರೆಯಲೆ ನೀರ್ಬಿಟ್ಟೆನು.

(‘ಬಾಲ್ಯಕಾಂಡ’: ಮತ್ತೆ ಶ್ರಾವಣಬಂತು)

## ಶ್ರಾವಣ

**ಕಿವಿಯೆಕವಿ :** ‘ನನ್ನ ಕಣ್ಣೇಕಿವಿಯು, ಕವಿಯು ನಾನು’ ಎಂದು ಹಾಡಿದ ಬೇಂದ್ರೆಯವರಿಗೆ ‘ಕಿವಿಯೆ ಕವಿ’. ಶ್ರಾವಣ ಕುತೂಹಲದ, ಜೀವದಾಧಾರ ಮಳೆಯ ಸುಂದರಪ್ರಕೃತಿಯ ಮಾಸ. ಅದು ಚೆಲುವು ಒಲವುಗಳೊಂದಿಗೆ ಬೇಂದ್ರೆಯವರ ಸೃಜನಶೀಲತೆ ಮತ್ತು ಜಿಜ್ಞಾಸೆ ರೂಪುಗೊಂಡು ವಿಕಾಸಗೊಳ್ಳಲು ಸ್ಫೂರ್ತಿಯ ಸೆಲೆಯಾದ ಮಾಸ. ಅವರು ಶ್ರಾವಣದ ನಾದ ಮಾಧುರ್ಯಕ್ಕೆ

ಶ್ರುತಿಗೊಂಡ ಕಿವಿಯನ್ನು ಕವಿಯಾಗಿಸಿದ 'ಶ್ರವಣ ಪ್ರತಿಭೆ'ಯ ಕವಿ. ಕಣ್ಣನ್ನೇ ಕಿವಿಯಾಗಿಸಿ ಸೌಂದರ್ಯಾರಾಧನೆಮಾಡಿದ ಕವಿ. ಕನ್ನಡದ ಇತರ ಕವಿಗಳು ವಸಂತದ ಕವಿಗಳಾದರೆ ಬೇಂದ್ರೆಯವರು ಶ್ರಾವಣದ ಕವಿ. ಶ್ರಾವಣ ಮಾಸದಲ್ಲಿ ಧಾರವಾಡದ ಆಕರ್ಷಕ ನಿಸರ್ಗಸೌಂದರ್ಯ ಅನುಭವಿಸಿದ ಕವಿಯ ಆನಂದ ಶ್ರಾವಣದ ಹಾಡುಗಳಾಗಿವೆ. ಅವರಿಗೆ ಶ್ರಾವಣಮಾಸವು ಸುಖ-ಸಂತೋಷ, ಬೇಸರ-ದು:ಖ ಮೇಳೈಸಿ ತರುವ ಮಾಸವಾಗಿದೆ :

ರಸವೆ ಜನನ
ವಿರಸ ಮರಣ
ಸಮರಸವೇ ಜೀವನ

ಎಂಬ ತತ್ವ ಬೋಧಿಸಿದ ಮಾಸವಾಗಿದೆ. ಶ್ರಾವಣ ಬೇಂದ್ರೆಯವರಿಗೆ ಭಗವಾನ್ ಶ್ರೀ ಕೃಷ್ಣನ ಜನನ, ಮಹರ್ಷಿ ಅರವಿಂದರ ಜನನ; ತನ್ನ ಮಕ್ಕಳಾದ ವಾಮನ, ಮಂಗಲಾರ ಜನನ ಹಾಗೂ ರಾಷ್ಟ್ರಕ್ಕೆ ಸ್ವಾತಂತ್ರ್ಯತಂದ ರಸಾನಂದದ ಮಾಸವಾಗಿದೆ. ಹಾಗೆಯೆ ಗೆಳೆಯ ಚೆನ್ನಮಲ್ಲಪ್ಪ, ತಾಯಿ ಅಂಬವ್ವ, ಪತ್ನಿ ಲಕ್ಷ್ಮೀಬಾಯಿ ತೀರಿಕೊಂಡ ನೋವಿನ ಮಾಸವಾಗಿ 'ಸಮರಸವೇ ಜೀವನ' ಎಂದು ಕವಿಭಾವ ಬೆಳಗುವಂತೆ ಮಾಡಿದ ಮಾಸವಾಗಿದೆ.

ಶ್ರಾವಣವೈಭವವನ್ನು ತನ್ನ ಸಖಿಗೆ ಕುತೂಹಲದಿಂದ ತೋರಿಸುತ್ತ; ಹುಲ್ಲು ಹೂವು ಹಬ್ಬದುಬ್ಬಿನಲ್ಲಿರುವುದನ್ನು, ಮಣ್ಣು ಹುಡಿಯ ಕಣಕಣವೂ ಕಣ್ಣು ಪಡೆದಹಾಗಿರುವುದನ್ನು, ಹುಡಿಯು ಅರಳಿ ಹೂವು ಆಗಲು ಹುಳಕ್ಕೆ ರೆಕ್ಕೆ ಒಡೆದಿರುವುದನ್ನು, ಅನಂತ ಕಾಲದಿಂದ ಹೂವಿನ ಹಡಲಿಗೆಯನ್ನು ಹೊತ್ತ ಭೂಮಿತಾಯಿ ಜೋಗಿತಿ ಮೈದುಂಬಿ ಕುಣಿಯುತ್ತಿರುವುದನ್ನು ಕಾವ್ಯವಾಗಿಸಿ ಆನಂದಿಸಿದ್ದಾರೆ :

ಏನು ಹಸಿರು ! ಏನು ಹಳದಿ!
ಸುತ್ತು-ಮುತ್ತು ನೋಡು ಕೆಳದಿ ॥ಪಲ್ಲ॥

ಹುಲ್ಲ ಹೂವು ಆದರೇನು;
ಹಬ್ಬ ದುಬ್ಬಿನಲ್ಲಿವೆ;

ದಿಬ್ಬಗಳನು ತಬ್ಬಲೆಂದು
ಎಲ್ಲ ನೆಲಕು ಹಬ್ಬಿವೆ.

* * *

ಮಣ್ಣು ಹುಡಿಯ ಕಣಕಣವೂ
ಕಣ್ಣು ಪಡೆದ ಹಾಗಿದೆ;
ಬಾನಿನಂಚಿನಲ್ಲಿ ಮೋಡ
ನೋಡಲಿದನೆ ಬಾಗಿದೆ.

* * *

ಹೂವ ಹಡಲಿಗೆಯನು ಹೊತ್ತ
ಭೂಮಿತಾಯಿ ಜೋಗಿತಿ
ಮೈತುಂಬಿ ಕುಣಿಯುತಿಹಳ-
ನಂತಕಾಲವೀಗತಿ.

**ಬಾರೊ ಮಗನೆ ಶ್ರಾವಣ :** ಬೇಂದ್ರೆಯವರು 'ಶ್ರಾವಣ' ಭೂಮಿ ತಾಯಿಯ ಮಗನೆಂದು, ಅವನು ಪಶ್ಚಿಮದಿಕ್ಕಿನಿಂದ ಗಾಳಿಕುದುರೆಯನ್ನು ಏರಿ ಪರ್ಜನ್ಯಗೀತ ಹಾಡುತ್ತ ಬಂದಿದ್ದಾನೆ. ನಗುವ ತುಟಿಯ ನನೆದ ಎದೆಯ ತರಳ ಅವನು. ಅವನು ಬಂದ ಕಾರಣವನ್ನು ಬೇಂದ್ರೆಯವರು ಪ್ರಕೃತಿಯ ಸತ್ಯಶೋಧನೆಯೊಂದಿಗೆ ಕಾಣುತ್ತ, ತಾನು ಕಂಡುಂಡ ಅನುಭವವನ್ನು ಸಾರ್ವತ್ರಿಕವಾಗಿಸಿದ್ದಾರೆ.

ಬಿಸಿಲ ಹಣ್ಣ ತಿಂದು ಹೊತ್ತು
ಹೆತ್ತ ನಿನ್ನ ಭೂಮಿ ತಾಯಿ
ಪಾಪ, ನಿನ್ನ ನೆನೆಸಿತು
ಎದೆಯ ಸೆರಗು ನನೆಸಿತು.
ಅಂತೆ ಬಂದೆ ಬಾರಣಾ
ಬಾರೊ ಮಗುವೆ ಶ್ರಾವಣಾ ! ('ಶ್ರಾವಣ' : ನಾದಲೀಲೆ)

ಬೇಂದ್ರೆಯವರು ಶ್ರಾವಣವು ಕಾಡಿಗೆ, ನಾಡಿಗೆ, ಬೀಡಿಗೆ, ಕಡಲಿಗೆಬಂದಿದೆ. ಹೊಳೆಗೆ ಮತ್ತು ಮಳೆಗೆ ಲಗ್ನ ಆಗಿದೆ. ಅದರಲ್ಲಿ ಭೂಮಿ ಮಗ್ನವಾಗಿದೆ. ಇಂತಹ ಶ್ರಾವಣದ ಮಳೆ ಊರಿಗೆ, ಕೇರಿಕೇರಿಗೆ ಬಂದು ಜನಕ್ಕೆ ತಂದ ರಸೋತ್ಸಾಹ ಸಹಜವಾದುದೆಂದು ಹಾಡುತ್ತಾರೆ :

ಶ್ರಾವಣ ಬಂತು ಮನಿಮನಿಗೆ ! ಕೂಡಿ ದನಿದನಿಗೆ
ಮನದ ನನಿಕೊನಿಗೆ
ಒಡೆದಾವ ಹಾಡೂ ! ರಸ ಉಕ್ಕತಾವ ನೋಡು ॥

('ಶ್ರಾವಣ' : ಹಾಡುಪಾಡು)

**ಬಂಧಮುಕ್ತ ಶ್ರಾವಣ :** ಬೇಂದ್ರೆಯವರು ೧೯೪೨ರಲ್ಲಿ ರಚಿಸಿದ 'ಬಂದಿ ಕಾರಾ ಶ್ರಾವಣಾ!' ಎಂಬ ಕವನದಲ್ಲಿ ಶ್ರಾವಣನನ್ನು ಕುರಿತು ಬಂಧ ಮುಕ್ತಿಯ ಶ್ರಾವಣ, ಶ್ರೀ ಕೃಷ್ಣ ದುಂದು–ಕಂಸನನ್ನು ಕೊಂದು ತಂದೆತಾಯಿಯನ್ನು ಬಿಡಿಸಿತಂದ ಮಾಸವೆಂದು ವರ್ಣಿಸಿದ್ದಾರೆ :

ಬಂದಿಯೊಳಗಿದ್ದವರ ಬಂಧನವ ಬಿಡಿಸುವಾ
ಬಂದಿಕಾರಾ ಶ್ರಾವಣಾ !

* * *

'ಕತ್ತಲೆಯ ತುಟ್ಟುತುದಿ ಹತ್ತಿರವೆ ಬೆಳಕುಬದಿ'
ಎಂದು ಸಾರೋ ಶ್ರಾವಣಾ.
ಮುಂದೆ ಬರುವ ಸ್ವತಂತ್ರ ವಂಧಿಮಾಗಧ ನೀನು
ಬಂಧುರಾಂಗಾ ಶ್ರಾವಣಾ !

ಎಂದು ಸ್ವತಂತ್ರ ವಂದಿಮಾಗಧನಾದ ಶ್ರಾವಣ ನಾಡಿಗೆ ಸ್ವಾತಂತ್ರ್ಯ ತರುವನೆಂಬ ಆಶಯವನ್ನೂ 'ಕತ್ತಲೆಯ ತುಟ್ಟತುದಿ ಹತ್ತಿರವೆ ಬೆಳಕು ಬದಿ' ಎಂಬ ತಾತ್ವಿಕ ಚಿಂತನೆಯನ್ನೂ ನೀಡಿದರು. ಅದರ ಫಲವೆಂಬಂತೆ ೧೯೪೭ರ ಶ್ರಾವಣ ಮಾಸದಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದಿತು.

**ದುಗುಡ ಇಲ್ಲಿಂದೋಡಿದೆ :** 'ಬಾರೊ ಸಾಧನಕೇರಿಗೆ' ಎಂಬ ಕವನದಲ್ಲಿ ಬೇಂದ್ರೆಯವರು ಧಾರವಾಡದ ತಮ್ಮ ಮನೆಯ ಸುತ್ತಲಿನ ನಿಸರ್ಗದ ಚಿತ್ರಣವನ್ನು ಶ್ರಾವಣದ ಹಿನ್ನೆಲೆಯಲ್ಲಿ ನೀಡುತ್ತ 'ಬಾರೊ ಸಾಧನಕೇರಿಗೆ' ಎಂದು ರಸಿಕ ಸಹೃದಯರಿಗೆ ಆಹ್ವಾನನೀಡಿದ್ದಾರೆ. ಶ್ರಾವಣದ ಸಿರಿಬರಲು ನೆಲಕೆ ಹರೆಯವು ಮರಳಿ, ಭೂಮಿತಾಯಿ ಒಡಮುರಿದು ಎದ್ದಳು ಎಂದು ಶ್ರಾವಣದ ಸಿರಿಯನ್ನು ಬಣ್ಣಿಸಿದ್ದಾರೆ :

ಮರವು ಮುಗಿಲಿಗೆ ನೀಡಿದೆ
ಗಿಡದ ಹೊದರೊಳು ಹಾಡಿದೆ
ಗಾಳಿ ಎಲ್ಲೂ ಆಡಿದೆ
ದುಗುಡ ಇಲ್ಲಿಂದೋಡಿದೆ
ಹೇಳು ಗೆಳೆಯಾ ! ಬೇರೆ ಎಲ್ಲೀ
ತೆರದ ನೋಟವ ನೋಡಿದೆ ?

ಎಂದು ಮನತೆರೆದು ಆನಂದಪಡುವಂತೆ ಗಿಡದ ಹೊದರಿನ ಹಾಡುಕೇಳುವಂತೆ ಮಾಡಿ ಮನದ ದುಗುಡವನ್ನು ಓಡಿಸಿದ್ದಾರೆ.

**ಶ್ರಾವಣಕ ತಪ್ಪಿತಾಗ್ಯಾನಾ :** ಬೇಂದ್ರೆಯವರು ಶ್ರಾವಣವನ್ನು ಕುರಿತು 'ಮತ್ತ ಶ್ರಾವಣಾ', 'ಶ್ರಾವಣದ ಹಗಲು', 'ಮಿಂಚು', 'ಮಳೆಗಾಲ', 'ಮತ್ತೆ ಬಂತು ಶ್ರಾವಣಾ' ಎಂಬ ಹಲವಾರು ಕವನಗಳನ್ನು ರಚಿಸಿದ್ದಾರೆ. ಅವರಿಗೆ ಶ್ರಾವಣಾ ಕುರಿತು ಕಾವ್ಯರಚಿಸುವುದೇ ಆನಂದವಾಗಿತ್ತು. 'ಪ್ರತಿ ವರ್ಷದಂತೆ ಬಂತು ಶ್ರಾವಣಾ' ಎಂಬ ಕವನದಲ್ಲಿ ಶ್ರಾವಣವನ್ನು ಜಗದ ಜೀವನಾ, ಕರುಳ ಹೂವಣಾ, ಇದು ಜೀವದಾಕರ್ಷ ಎಂದು ಬಣ್ಣಿಸುತ್ತ 'ಅಂಬಿಕಾತನಯದತ್ತ'ರು ಶ್ರಾವಣದ ಹುಚ್ಚಿನಲ್ಲಿ ಮದೋನ್ಮತ್ತರಾಗಿದ್ದಾರೆ.

ಶ್ರಾವಣಕ ತಪ್ಪಿತಗ್ಯಾನಾ
ಎಲ್ಲಿದೋ ಧ್ಯಾನಾ
ಹುಚ್ಚ ಆಗ್ಯಾನಾ
ಮದೋನ್ಮತ್ತಾ
ಅಂಬಿಕಾತನಯದತ್ತಾ.

# ಪ್ರೇಮಗೀತೆಗಳು

**ಈ ಜಗ, ಅಪ್ಪಾ, ಅಮ್ಮನ ಮಗ :** ಬೇಂದ್ರೆಯವರ ಪ್ರೇಮಗೀತೆಗಳು ಏಕಾಂತದ ನಲ್ಲನಲ್ಲೆಯರ ಒಲವಿನ ಹಾಡಾದರೂ, ಲೋಕಾಂತವಾಗಿ ತಾತ್ವಿಕ ಚಿಂತನ ಪರವಾಗಿ ಎಲ್ಲರ ಮನದ ಹಾಡಾಗಿವೆ. ಸುಮನ ಸುಪ್ರಸನ್ನ ಮನದ ಆರೋಗ್ಯವಂತ ಗೀತವಾಗಿವೆ. ಪ್ರೇಮಜೀವನದ ರುಚಿ, ಮಾಧುರ್ಯದ ಸವಿಯು ಜನಪದ ನುಡಿಯ ಸಹಯೋಗದಿಂದ ಬೇಂದ್ರೆಯವರ ಕಾವ್ಯಾವರಣದ ಹೊಸ ಸೃಷ್ಟಿಯಾಗಿದೆ. ಬೇಂದ್ರೆ ಕಾವ್ಯದ ಸ್ಥಾಯಿಭಾವವಾದ ಒಲವು, ಸ್ನೇಹ, ಪ್ರೇಮ ಮತ್ತು ಆನಂದದ ನಲ್ಮೆಯ ಅನುರಾಗಗೀತೆಯಿಂದ ಶುದ್ಧ ಪ್ರೇಮದ ಬೆಳಕನ್ನು ನೀಡಿದೆ. ಕವಿಯ ಪ್ರತಿಭೆಯು ಪ್ರೀತಿಯ ಹಾಡನ್ನು ಹಾಡುತ್ತ ಸಹೃದಯರ ಹೃದಯಕ್ಕೆ ಲಗ್ಗೆಯಿಡುವ ಮಾಂತ್ರಿಕ ಶಕ್ತಿ ಹೊಂದಿದೆ :

‘ಈ ಜಗ, ಅಪ್ಪಾ, ಅಮ್ಮನ ಮಗ
ಅಮ್ಮನೊಳಗ ಅಪ್ಪನ ಮೊಗ
ಅಪ್ಪನ ಕತ್ತಿಗೆ ಅಮ್ಮನ ನೊಗ
ನಾ ಅವರ ಕಂದ
ಶ್ರೀ ಗುರುದತ್ತ ಅಂದ’. (ನಾಕುತಂತಿ)

ಎಂದು ಅಪ್ಪಅಮ್ಮನ ಒಲವನ್ನು ; ಅದರ ಫಲವಾದ ಈ ಜಗದ ಭಾಗವಾಗಿ ಕಂದರಾದ ನಮ್ಮ ಹಾಡನ್ನು ಹಾಡಿದಾಗ; ಆ ಒಲವಿನ ಹಾಡು ನಮ್ಮ ಅಪ್ಪಅಮ್ಮಂದಿರು ನಮಗೆ ಹಾಡಿಹೇಳಬಹುದಾದ ಹಾಡಾಗಿ ಆತ್ಮೀಯವಾಗುತ್ತದೆ. ನಾವು ನಮ್ಮ ಮಕ್ಕಳಿಗೆ ಹೇಳಿ ನಲಿಯಬಹುದಾದ ಗೀತವಾಗುತ್ತದೆ. ಹೀಗೆ ಸಹಜಪ್ರೇಮದ, ದಾಂಪತ್ಯದ ಮಿತಿಯಲ್ಲಿ ಅರಳಿದ ಗೀತೆ ಅವರ ಪ್ರೇಮಗೀತೆಗಳು. ಆ ಪ್ರೇಮಗೀತೆಗಳಲ್ಲಿ ಚೆಲುವು, ಬೆಡಗು, ಮೈಸಿರಿ, ಆನಂದ ಮೇಳೈಸಿ ಮನಕ್ಕೆ ಮುದನೀಡುತ್ತದೆ. ಆ ಪ್ರೇಮದ ಆಕರ್ಷಣೆಯನ್ನು ‘ವಾರಿನೋಟ’ ಎಂಬ ಕವನದಲ್ಲಿ; ಹೊಳೆಯಮೇಲೆ ನಲಿದಾಡುವ ಹೆಣ್ಣು, ಹೊಳೆಯ ಒಳಗೆ ಹರಿದಾಡುವ ಗಂಡು ಇವರಲ್ಲಿ ಸುಳಿದಾಡುತ್ತಿದ್ದ ರೀತಿಯನ್ನು

ಅವರನ್ನೇ ರೂಪಕವಾಗಿಸಿ ಬಣ್ಣಿಸಿರುವುದು ಪ್ರೀತಿಯ ಸಹಜತೆಯನ್ನು ವ್ಯಕ್ತಮಾಡುವ ಕವಿಯ ಪ್ರತಿಭೆಗೆ ಸಾಕ್ಷಿಯಾಗಿದೆ :

ವಾರಿನೋಟ ಹಾರುತಿತ್ತೋ ಹೊಳಿಮ್ಯಾಗ
ಹೊಸಾ ಹರೆ ಈಸತಿತ್ತೋ ಹೊಳಿಯಾಗ ॥ಪಲ್ಲ॥

* * *

ಸೂಜಿಗಲ್ಲು ತಿರುಗತಿತ್ತೋ ಹೊಳಿಮ್ಯಾಗ
ಸೂಜಿಯೊಂದು ತೇಲುತಿತ್ತೋ ಹೊಳಿಯಾಗ

ಸೆರಗು ಒಂದು ಅಲೆದಾಡತಿತ್ತೋ ಹೊಳಿಮ್ಯಾಗ
ಬೆರಳು ಒಂದು ನಲಿದಾಡತಿತ್ತೋ ಹೊಳಿಯಾಗ.

**ಹರೆಯೆಂಬೋದು ತೆರಿಹಾಂಗ :** ಆ ಅಲೆದಾಟ ನಲಿದಾಟ ಯೌವನಕ್ಕೆ ಸಹಜವಾದುದು. ಆದರೆ ಆ ಸೆಳೆತದಿಂದ ತಪ್ಪಸಿಕೊಳ್ಳಲು ಸಾಧ್ಯವಿಲ್ಲದೆ ಅದನ್ನು ಪೂರ್ತಿಸವಿವ ಆಸೆ ಮನದಲ್ಲಿದೆ. ಅಂತಹ ಅಮೂರ್ತ ಆಸೆಯನ್ನು ತಬ್ಬಿಕೊಳ್ಳುವಂತೆ ಮಾಡುವ; ಭಾಷೆಯಲ್ಲಿ ಮೂರ್ತಗೊಳಿಸುವ ಪ್ರತಿಭೆಯೇ ಬೇಂದ್ರೆಕಾವ್ಯದ ವೈಶಿಷ್ಟ್ಯವಾಗಿದೆ. ಯೌವನವೆನ್ನುವುದು ಒಂದು ಅಲೆಯ ರೀತಿ ಬಂತು ಎಂದು ಹೇಳಿ, ಬೇಗ ಹೊರಟುಹೋಗುವುದು. ಅಂತಹ ಜೀವನ ನಾಟಕದಲ್ಲಿ, ಹೂವುಹಣ್ಣಿನ ಕೂಟದಲ್ಲಿ; ಬಾ–ಮಾಯಾದೇವಿ ಮಾಟದಲ್ಲಿ ಅದರ ಸವಿ, ಸವಿ–ಎಂದು ಕವಿ ನುಡಿಯುತ್ತಾರೆ :

ಜೀವನ ಒಂದು ನಾಽಟಽಕ
ಹೂವು ಹಣ್ಣಿನಾ ಕೂಟಕಽ ॥ಪಲ್ಲ॥

* * *

ಹರೆಯೆಂಬೋದು ತೆರೀಹಾಂಗ
ಬಂತ ಅಂತ ಹೊರಟಿತು ಬ್ಯಾಗ॥
ಬಾ ಸಿಂಗಾರದ ಬ್ಯಾಟಕ
ಮುಗಿಯದಽ ಆಟಕಽ॥ ('ಜೀವನಕಲ್ಯಾಣ': ಅರಳುಮರಳು)

ಆ ಸಿಂಗಾರದ ಬೇಟದಲ್ಲಿ ತುಟಿಗೆ ತುಟಿ ಮುತ್ತನೊತ್ತಿ ಬೆರೆತಾಗ, ತುತ್ತೂ ತುತ್ತೂ ತುತ್ತೂ ಬರಿ ಮುತ್ತು. ಮುತ್ತೆ ಮತ್ತು. ಅಂತಹ ಭಾವವನ್ನು ಕಾವ್ಯವಾಗಿಸುವ ಬೇಂದ್ರೆಯವರ ಜಾದೂಗಾರಿಕೆಯನ್ನು 'ಹೂಂ-ಊಂಹೂ' ಕವನದಲ್ಲಿ ಓದಿಸವಿದು, ಹಾಡಿನಲಿಯಬಹುದು:

ಕೂಹೂಽ ಕೂಹೂಽ ಕೂಹೂ
ಮೈತುಂಬ ಮಾವು ಹೂಽ ಹೂಽ
ಒಳಹೊರಗು ಹೂತೆವೇ ನಾವೂ
ನೀವೂಽ
ಕೂಹೂಽ

ತುಟಿ ತುಟಿಗೆ ಮುತ್ತನೊತ್ತಿಽಽ
ಜೇನ್ನುಡಿಯ ಬೀಜ ಬಿತ್ತಿಽಽ
ಮಧುಚಂದ್ರನ ಸ್ವಪ್ನವನೆತ್ತಿಽಽ
ಸುಳಿದಾಡುತಿತ್ತು ಸುತ್ತೂಽ
ತುತ್ತೂ ತುತ್ತೂ ತುತ್ತೂ
ಬರಿ ಮುತ್ತೇ ಮುತ್ತೇ ಮತ್ತೂ.

**ಕಣ್ಣಕಿರಣದಲ್ಲಿ ನೂತು :** ಮೈತುಂಬ ಉರಿವ ಪ್ರೇಮದ ಕಾವಿನಲ್ಲಿ ನಲ್ಲ ನಲ್ಲೆಯರು ಲಲ್ಲೆಯಾಡುತ್ತ ಸ್ವರ್ಗಲೋಕದ ಅಂಚಿನಲ್ಲಿ ನಿಂತು, ಭಾವ ತುಂಬಿಕೊಂಡು ಪರಸ್ಪರರನ್ನು ನೋಡಿ ಆನಂದಿಸುತ್ತಾರೆ. ಆ ನೋಟದಲ್ಲಿ ನಲ್ಲೆ; ನಲ್ಲನ ಲಲ್ಲೆವಾತು ಮೀಸೆ ಕುಡಿಯಲ್ಲಿ ಹೂತು, ಕುಣಿದು, ಮಣಿದು ಬಂದುಹೋದ, ಪ್ರಾಣ ತುಂಬಿದ ಉಸಿರಿನ ಗಾನದ ಝುಳಕು ಕಾಣುತ್ತಾಳೆ. ನಲ್ಲನು ನಲ್ಲೆಯ ಲಲ್ಲೆವಾತನ್ನು ಕುರಿತು; ನಿನ್ನ ಲಲ್ಲೆವಾತು ಕಣ್ಣಕಿರಣದಲ್ಲಿ ನೂತು, ನೇತು, ಜೋತು, ಬಂತು, ಹೋ'ತು ಎಂದು ಮಾತಿನಲ್ಲೆ ಹೂಂಗುಟ್ಟಿ ಹುದುಗಿದ ಕಣ್ಣಕಿರಣವನ್ನು ಕಾಣುತ್ತಾನೆ. ಆ ಕಣ್ಣಕಿರಣದ ಬೆಳಕಿನ ಧ್ಯಾನದಲ್ಲಿ ತನ್ಮಯನಾಗುತ್ತಾನೆ :

ನಲ್ಲೆ : 'ನಲ್ಲ! ನಿನ್ನ ಲಲ್ಲೆ ವಾತು
ಮೊಸೆಕುಡಿಯಲಲ್ಲೆ ಹೂತು
ಕುಣಿದು, ಮಣಿದು, ಬಂತು, ಹೋ'ತು
ನಲ್ಲ, ನಿನ್ನ ಲಲ್ಲೆವಾತು'.

ನಲ್ಲ : 'ನಲ್ಲೆ ! ನಿನ್ನ ಲಲ್ಲೆ ವಾತು
ಕಣ್ಣ ಕಿರಣದಲ್ಲಿ ನೂತು
ನೇತು, ಜೋತು, ಬಂತು, ಹೋ'ತು
ನಲ್ಲೆ, ನಿನ್ನ ಲಲ್ಲೆವಾತು'.

**ಸಂಗಮಿತ ಹೊಳೆ :** ಆ ಹರೆಯನ್ನು ಸವಿಯುತ್ತ, ನಲ್ಲ ನಲ್ಲೆಯರಾದ ಸಖ ಸಖಿಯರು ತಾವೊಂದು ರಸವಾಗಬೇಕು, ಜೀವೈಕ್ಯದಲ್ಲಿ ಸಂಗಮಿತ ಹೊಳೆಯಾಗಿ ಹರಿಯಬೇಕು ಎಂದು ಸಾರುತ್ತಾರೆ. ಆ ಸೇರಿ ಹರಿವ ಬಗೆ 'ಜೀವದ ಗೆಳತಿ' ಕವನದಲ್ಲಿ ವ್ಯಕ್ತಗೊಂಡ ಬಗೆ ಸಂಗಮಿತ ಹೊಳೆಯಾಗಿದೆ:

ಕೈಗೆಕ್ಕೈ, ಮೈಗೆಮ್ಮೈ, ಬಾಯ್ಗೂಡಿಸೇ!
ಸಾಗಿ, ಬಿಗಿತಾಗಿ, ಒಂದಾಗಿ, ಹನಿಹನಿಗೂಡಿ,
ಮಾಗಿ, ಗಡನೊಂದೆ ರಸವಾಗಿ, ಜೀವೈಕ್ಯದೊಳು
ಸಂಗಮಿತ ಹೊಳೆಗಳಂತೆ.
ಆಗಿ, ಹರಿಯೋಣು ಬಾ.

ಪ್ರೀತಿಯೆಂಬ ಚುಂಬಕ ಆ ಮುಖ–ಈ ಮುಖವನ್ನು ಕೂಡಿಸಿ ಆಡಿಸಿದ್ದು ಕಾಮದೇವನ ಕೃಪೆಯಾಗಿದೆ. ಅದರ ಫಲವೇ ಆಮುಖ–ಈಮುಖ ಬೇರೆ ಬೇರೆ ಎಂಬ ಭಾವ ಬತ್ತಿಹೋಗಿ; ಪ್ರೀತಿಯ ಬೇರು ಬತ್ತಿಯಾಗಿ ದೀಪಹತ್ತಿ, ಅವರ ಪ್ರೀತಿಯ ಸ್ನೇಹಬೆಳಗುತ್ತ ಇನ್ನೊಂದು ದೇಹವಾಗಿ ತುಂಬಿ ಬರುವುದಾಗಿದೆ. ಅದೇ ಪ್ರೇಮದ ಸಾರ್ಥಕತೆ.

ಆ ಮುಖಾ–ಈ ಮುಖಾ
ಒಂದು ಸತ್ತು
ಒಂದು ಅತ್ತು

ಒಂದಕ್ಕೊಂದು ಸಮ್ಮುಖಾ
ಬೇರೆ ಬತ್ತಿ
ದೀಪ ಹತ್ತಿ
ಬೆಳಗುತಿಹುದು ಸ್ನೇಹವಾ
ತುಂಬಿ ಬೇರೆ ದೇಹವಾ, (ಚಿರಂತನ : ಸಖೀಗೀತ)

**ನಾನೀನ ನುಡಿನುಂಗಿ :** ಬೇಂದ್ರೆಯವರು ಜೀವನದಲ್ಲಿ ಕಷ್ಟಸುಖ ಏನೇ ಇರಲಿ, ಬದುಕುಮಾಡಲು ಸಂತೆಮಾಡಬೇಕಾದ ಚಿಂತೆಯಿರಲಿ, ಎಲ್ಲವನ್ನೂ ಮರೆತು ಕುಣಿಯಬೇಕು ಆನಂದ ಪಡೆಯಬೇಕು; ಸತಿಪತಿಯರು ನಾನು, ನೀನು ಎಂಬ ಭೇದ ನುಂಗಿ ಒಂದಾದ ತಾನಾಗಬೇಕು ಎಂದು ಹೇಳಿದ್ದಾರೆ.

ನಾನೀನ ನುಡಿ ನುಂಗಿ ತಾನೀನ ತಾನೆ ತಾ
ತಾನಾಗಿ ತನನಽನ ಬಂಧಾಂಗ.

ಆ ಬದುಕಿನ ಸಹಜನಾದದಲ್ಲಿ ಒಂದಾದಾಗ ಸಾವಿನ ನೋವಿಲ್ಲ ಎಂಬುದನ್ನು ತಿಳಿಯುತ್ತ, ಹಾಲ್ಜೇನು ಸವಿಯುವ ಸುಖಾನಂದಕ್ಕಾಗಿ ಕುಣಿಯಬೇಕು ನಲಿಯಬೇಕು ಎಂದು ಜಗದ ಸಖಸಖಿಯರನ್ನು ಬೇಂದ್ರೆ ಕುಣಿಸಿದ್ದಾರೆ :

ಅಂತಿರಲಿ
ಇಂತಿರಲಿ
ನಿಂತಲ್ಲಿ ನಿಂತಿರಲಿ
ಸಂತೆಯ ಚಿಂತಿರಲಿ ॥ಕುಣಿ॥

ಕಣ್ ಒಳಗ ಹೊರಳಿಸಿ
ಎದೆ ಮುಗುಳನರಳಿಸಿ
ಹೂ ನೀರನುರುಳಿಸಿ ॥ಕುಣಿ॥

ನಾನಲ್ಲ
ನೀನಲ್ಲ
ನನಲ್ಲಿ ನೀನಿಲ್ಲ
ಸಾವಿನ ನೋವಿಲ್ಲ ॥ಕುಣಿ॥

ಇದ್ದದ್ದು ಮರೆಯೋಣ
ಇಲ್ಲದ್ದು ತೆರೆಯೋಣ
ಹಾಲ್ಜೇನು ಸುರಿಯೋಣ ॥ಕುಣಿ॥

* * *

ಕುಣಿಯೋಣು ಬಾರಽ
ಕುಣಿಯೋಣು ಬಾ.

**ಒಂದುಸಿರೆ ತಾನಾಡಿದಂತೆ :** ಆ ಕುಣಿತವನ್ನು ಬೇಂದ್ರೆಯವರು ದಾಂಪತ್ಯದ ಜೋಡಿಗೆ ನೀಡುತ್ತಾ ನಲಿಯುತ್ತಾರೆ. ಉಸಿರಾಡಲು ಎರಡು ಶ್ವಾಸಕೋಶಗಳಿದ್ದರೂ ಒಂದೇ ಉಸಿರು ಅಲ್ಲಿ ಆಡುತ್ತದೆ. ಹಾಗೆ ಪತಿಪತ್ನಿಯ ಮನದ ಶ್ರುತಿ ಒಂದಾಗಿ ಉಸಿರಾಡಿದರೆ ಬಾಳುದ್ದ ಬದುಕಬಹುದು ಎಂದು 'ಮನದನ್ನೆ'ಯಲ್ಲಿ ನುಡಿದ್ದಾರೆ :

**ನಿನ್ನಮೈಸಿರಿಯೇನು?**
**ನನ್ನ ಐಸಿರಿಯೇನು ?**
**ಒಂದುಸಿರೆ ತಾನಾಡಿದಂತೆ ಇಹುದು**
**ಹೀಗಿರಲು ಬಾಳುದ್ದ ಬದುಕಬಹುದು.**

ಹೀಗೆ ತಾತ್ವಿಕಚಿಂತನೆ ನೀಡುತ್ತ ಬೇಂದ್ರೆಯವರು ದಿಟದ, ಪ್ರೀತಿಯ ನೇಕಾರಿತಿಯು ಮುಗಿಯದಿರುವ, ಪ್ರೇಮ ನಿರಂತರವಾದ ಬಟ್ಟೆಯನ್ನು ನೇಯುತ್ತಿದ್ದಾಳೆ ಎಂದು ನುಡಿದಿದ್ದಾರೆ. ಆ ಅನಂತವಾದ ಪ್ರೀತಿಯಲ್ಲಿ ನಾವೀರ್ವರು ಅರಿತುಬಾಳೋಣ ಎಂದು 'ಗಂಡುಸು–ಹೆಂಗುಸಿಗೆ' ಕವನದಲ್ಲಿ ನುಡಿದಿದ್ದಾರೆ :

ನನ್ನ ನಿನ್ನಯ ಮನದ ಜೊನ್ನ ಮಗ್ಗದ ಮೇಲೆ
ನಿನ್ನ ಮತ್ತೆನ್ನೆದೆಯ ಕಸೆಗೆ ಕಸೆಯನುಗೊಳಿಸಿ
ನನ್ನಿ ನೇಕಾರಿತಿಯು ಮುಗಿಯದಿಹ ಬಟ್ಟೆಯ–
ನ್ನನವರ ನೇಯುತಿಹಳು.

**ಜೀವಜೀವಕೆ ಉದ್ದೀಪನವಾದುದು ಜೀವನವು :** ದಾಂಪತ್ಯ ಜೀವನದ ಅರ್ಥ–ಸತಿಪತಿಯರು ಅನ್ನ, ಕಾಮದ ಬದುಕನ್ನು ಮೀರಿ ಜೀವಜೀವಕೆ ಉದ್ದೀಪನವಾಗುವ ರೀತಿ ಬಾಳುವುದೆ ಬಾಳು ಎಂಬ ಜೀವನ ವ್ಯಾಖ್ಯೆಯನ್ನು ಬೇಂದ್ರೆಯವರು 'ಸಖೀಗೀತ'ದಲ್ಲಿ ನೀಡಿದ್ದಾರೆ.

ಅನ್ನಕೆ ಬಾಳಾಗಿ ಕಾಮಕೆ ಹೋಳಾಗಿ
ಮಾನಕೆ ಆಳಾಗಿ ಉಸಿರೆಳೆದುದು
ಬಾಳಲ್ಲ ಬದುಕಲ್ಲ; ಜೀವ ಜೀವಕೆ ಉ–
ದ್ದೀಪನವಾದುದೆ ಜೀವನವು.

ಅದು ಇದೆ ಎದೆಯಲ್ಲಿ, ಬೆಳಕಿನ ಬದಿಯಲ್ಲಿ
ರಸಗಂಗಾನದಿಯಲ್ಲಿ ಅದರುಗಮ
ಹೆಸರದಕೆ ಪ್ರೀತಿಯು, ಹಿಗ್ಗಿನ ರೀತಿಯು
ಆತ್ಮದ ನೀತಿಯು ಮಧುಸಂಗಮ.

## ಒಲುಮೆಯ ಕಿಚ್ಚು

**ಕಾಮದೇವ :** ಬೇಂದ್ರೆಯವರ ಕಾವ್ಯದಲ್ಲಿ ದೇವಕಾಮವು ಕಾಮದೇವನಾಗಿ 'ಮಗು'ವಾಗಿ ಅವತರಿಸಿದೆ. ಮಗು ಎಂದರೆ ಕಾಮದೇವ. ಆ ದೇವಕಾಮನನ್ನು 'ಅನಂಗ' ಎಂದು ಕರೆದಿರುವುದರಿಂದ ಅದು ಒಂದು ಭಾವವಾಗಿ ತತ್ತ್ವವಾಗಿ ಮಾನವರ ಬದುಕಿನಲ್ಲಿದೆ. ಭರತನ ರಸಪ್ರಭೇದಗಳ ವಿವರ ನೀಡುತ್ತ, ಶೃಂಗಾರ ರಸದ ಬಗ್ಗೆ ತೀನಂಶ್ರೀ ಯವರು "ಈ ರಸಗಳಲ್ಲಿ ಮೊದಲನೆಯದು ಶೃಂಗಾರ; ಪಟ್ಟಿಯಲ್ಲಿ ಮಾತ್ರವಲ್ಲ, ಜನಪ್ರಿಯತೆಯಲ್ಲಿ ಕೂಡ. ಸ್ತ್ರೀಪುರುಷರಿಗಿರುವ ಪರಸ್ಪರ ಪ್ರೇಮವೇ ರತಿ. ಇದನ್ನು ಅರಿಯದ ಮಾನವರಿಲ್ಲ; ಪಶುಪಕ್ಷಿಗಳಲ್ಲೂ ಈ ಆಕರ್ಷಣೆಯುಂಟೇ ಉಂಟು. ರತಿಭಾವ ಹೀಗೆ ಸಕಲಹೃದಯ ಸಂವಾದಿಯಾಗಿರುವುದರಿಂದ ರಸಗಳಲ್ಲಿ ಶೃಂಗಾರಕ್ಕೆ ಪ್ರಮುಖ ಸ್ಥಾನದೊರೆತಿದೆ. ಸಂಭೋಗ ಶೃಂಗಾರ, ವಿಪ್ರಲಂಭ ಶೃಂಗಾರ ಎಂದು ಇದರಲ್ಲಿ ಎರಡು ಬಗೆ. ಒಂದರ ವಸ್ತು ಪ್ರಿಯರ ಸೇರಿಕೆ, ಇನ್ನೊಂದರದು ಅಗಲಿಕೆ"[೧೪] ಎಂದು ತಿಳಿಸಿದ್ದಾರೆ.

ಈ ಎರಡು ಬಗೆಯ ಶೃಂಗಾರದಲ್ಲಿ ವಿಪ್ರಲಂಭ ಶೃಂಗಾರದಲ್ಲಿಯಕಿಚ್ಚು, ಬೇಂದ್ರೆಯವರ ಕಾವ್ಯದಲ್ಲಿ ಯಾವ ಯಾವ ರೂಪತಾಳಿ ಬಂದಿವೆ ಎಂಬುದನ್ನು ಅವಲೋಕಿಸೋಣ. ಬೇಂದ್ರೆ ಈ ಭೂಮಿಯ ಮಣ್ಣ ಕಣಕಣದಲ್ಲಿ ಸುಪ್ರೇಮ ಕಾಣಲು ಕಾತರಿಸಿದ ಮಂಗಲಭಾವದ ಶ್ರೇಷ್ಠಕವಿ. ಈ ಪೃಥ್ವಿ – ಹೆಣ್ಣು, ಬಾನು–ಒಡೆಯನಿಂದ ಅಗಲಿ ವಿರಹ ಬವಣೆಯಲ್ಲಿ ಸುತ್ತುತ್ತಿದ್ದಾಳೆ. ಇವಳು ಸುರಿಸಿದ ಕಣ್ಣ ನೀರು ಕಡಲಾಗಿ ಕಾದು, ಮೋಡವಾಗಿ ಬಾನಿನ ಒಡೆಯನನ್ನು ಕೂಡಿದಾಗ, ಸಂತಸಗೊಂಡ ಸುಖದ ಕಣ್ಣೀರೆ ಮತ್ತೆ ಮಳೆಯಾಗಿ ಉದುರಲು ಮೈಯೆಲ್ಲ ಪುಳಕಗೊಂಡಂತೆ ಹೃದಯ ಹಚ್ಚನಾದಂತೆ ಹಸಿರು ಬೆಳೆ ಪಡೆಯುತ್ತಾಳೆ ಎಂದು ಕಲ್ಪಿಸಿದ್ದಾರೆ. ಇಂತಹ ಮಣ್ಣು ಹೆಣ್ಣಾದ, ಭೂಮಿ ಮತ್ತು ಬಾನಿನ ನಲ್ಲನ ಪ್ರೀತಿ; ಅವರ ವಿರಹ, ಸ್ನೇಹದಾಸೆ ಅವರ ಫಲರೂಪಿಯಾದ ಹಚ್ಚಹಸಿರು ಬೇಂದ್ರೆಯವರ 'ಒಲುಮೆಯ ಕಿಚ್ಚಿನ' ಸುಂದರ ರೂಪಕವಾಗಿದೆ. ಅದನ್ನು ಮೇಘದೂತದ ಪೀಠಿಕೆಯಲ್ಲಿ 'ಭೂಮಿಯ ಕಾಮ' ಎಂದು ಕರೆದಿದ್ದಾರೆ.

ಮಣ್ಣು ಹೆಣ್ಣು ಬಾನೊಡೆಯನಿಂದ ಅಗಲಿಹಳನಾದಿಯಿಂದ
ವಿರಹ ಬವಣೆಯಲಿ ತಿರುಗೆ ತಿರುಗುವಳು ಹೊತ್ತುಸುತ್ತಿನಿಂದ ॥
ಕಣ್ಣನೀರು ಕಡಲಾಗಿ ಕಾದು ಉಗಿಯಾಗಿ ಮೋಡವಾಗಿ
ಎದೆಗೆ ಉದುರೆ ಬಾನಿಂದ, ನವಿರುವಳು ಹೃದಯ ಹಚ್ಚನಾಗಿ ॥

ಈ ಮಣ್ಣು ಹೆಣ್ಣಿನ ಮಕ್ಕಳಾದ ಹೆಣ್ಣುಗಂಡಿನ ಮೃಣ್ಮಯ ದೇಹದ ಹೃನ್ಮಯ ಮನದ ಪ್ರೇಮದ ಹಾಡನ್ನು ಬೇಂದ್ರೆಯವರು ನೀಡುತ್ತ, ಅವರ ಒಲ್ಮೆಯ ದೇವಕಾಮನನ್ನು ಕಾಮದೇವ (ಮಗು)ನಾಗಿ ಪಡೆವುದನ್ನು ಕಾವ್ಯವಾಗಿಸಿದ್ದಾರೆ. ಅವರು ಪುರಾಣದ ದೇವದೇವಿಯರ ಮತ್ತು ಐತಿಹಾಸಿಕ ರಾಜರಾಣಿಯರ ಸಂಯೋಗಶೃಂಗಾರ, ವಿಪ್ರಲಂಭಶೃಂಗಾರದ ಕಾವ್ಯ ರಚಿಸಿಲ್ಲ. ಅದಕ್ಕೆ ಬದಲು ಜನಸಾಮಾನ್ಯರ ಒಲುಮೆಯು ಹೂವಾಗಿ ಅರಳಿದ ಶ್ರೀಸಾಮಾನ್ಯನ ಮಂಗಲಭಾವದ ದ್ಯೋತಕವಾದ, ಜನಪದರ ವಿರಹಮಿಲನಗಳನ್ನು ಜನಪರವಾಗಿ ನೀಡಿರುವುದು ನಮ್ಮ ಶಿಷ್ಟ ಕಾವ್ಯ ಪರಂಪರೆಯಲ್ಲಿ ಮಹತ್ವದ ಸಂಗತಿಯಾಗಿದೆ.

**ಅನಾದಿಕಾಮ ಕ್ರಮ :** ಕಾಮ ಅನಾದಿ. ಅನಾದಿಯ ಸೃಷ್ಟಿಕರ್ತಬ್ರಹ್ಮ. ಆದಕಾರಣ ಬ್ರಹ್ಮನ ಹೃದಯದಲ್ಲಿ ಜನಿಸಿದ ಇಚ್ಛೆ ಅದು. ಅದುವೆ ದೇವಕಾಮ. ಅದು ಕಾಮದೇವನಾಗಿ, ಜಗದ ತಂದೆತಾಯಿಯರ ಕಂದನಾಗಿ ಅವತರಿಸಿದೆ ಎಂದು ಬೇಂದ್ರೆಯವರು ಅರ್ಥವಿಸ್ತಾರವನ್ನು ನೀಡಿದ್ದಾರೆ. ಅದನ್ನು 'ಅನಾದಿ ಕಾಮಕ್ರಮ' ಎಂದು ಕರೆದಿದ್ದಾರೆ :

ಬ್ರಹ್ಮ-ಹೃದಯದಲಿ ಜನಿಸಿದಿಚ್ಛೆ ಕೊನೆಗಾಣಲೆಂದು ಬಾಳಿ
ಕಂಡ ಕಡೆಗು ಶತರೂಪೆಯಲ್ಲಿ ಮಧು-ರೂಪ-ರೂಪತಾಳಿ॥
ಜಗದ ತಂದೆ-ತಾಯಿಯರ ಕಂದ ಅವತರಿಸೆ ಜೀವನಾಗಿ
ಬಂತು ಪೂರ್ವದಲಿ, ದೇವ-ಕಾಮವೇ; ಕಾಮ-ದೇವನಾಗಿ ॥

ಬೇಂದ್ರೆಯವರು ಕಾಳಿದಾಸನ ಶಾಪ ವಿಪ್ರಲಂಭ ಶೃಂಗಾರಕ್ಕೆ ಉದಾಹರಣೆ ಯಾದ ರಾಜರಾಣಿಯರ ಕಥೆಯಾದ 'ಶಾಕುಂತಲ' ವನ್ನು ಅನುವಾದ ಮಾಡಲು ಆಯ್ಕೆ ಮಾಡಿಕೊಳ್ಳದೆ; 'ಮೇಘದೂತ'ವನ್ನು ಆಯ್ಕೆ ಮಾಡಿ ಕೊಂಡಿದ್ದರಲ್ಲಿ ಅವರ ಪ್ರಜಾತಂತ್ರಪರ, ಜನಸಾಮಾನ್ಯಪರವಾದ ಒಲವನ್ನು ಸ್ಪಷ್ಟವಾಗಿ ಕಾಣಬಹುದು. "ಮೇಘದೂತದಲ್ಲಿ ಒಬ್ಬ ಯಕ್ಷ-ಯಕ್ಷಿಯರ ವಿರಹಾವಸ್ಥೆಯ ವರ್ಣನೆ ಇದೆ. ವಿರಹಾವಸ್ಥೆಯಲ್ಲಿ ತಾಳಿಬಾಳುವ ಕಾಮವೇ ಧರ್ಮ ಅವಿರುದ್ಧ ಕಾಮವೆನಿಸಿ ಜೀವೋನ್ನತಿಯ ಹಾದಿಯಾಗುವದು"[೧೫] ಎಂದು ಅವರೇ ತಿಳಿಸಿದ್ದಾರೆ, ಅಂತಹ ವಿರಹವನ್ನು :

ತನ್ನ ಕಿಚ್ಚಿನೊಳೆ ಬೆಂಕಿ ಸುಟ್ಟು ಬೆಳಕಾಗಿ ಮಿಂಚಬಹುದು ॥
ಮೂಲ ಕಾಮದಲ್ಲಿ ವಿರಹ ಬೆಳೆದು ಸುಪ್ರೇಮವರಳಲಹುದು ॥
ಜನ್ಮಜಾತ ಕುತುಕಕ್ಕೆ ರಮ್ಯ ತವನಿಧಿಯ ಹಾಗೆ ಭವ್ಯ
ಸತ್ಯಕಾಗಿ ನೀರಡಿಸಿ ನಿಂತ ಸೌಂದರ್ಯದಂತೆ ದಿವ್ಯ॥

ಎಂದು ವಿರಹದಲ್ಲಿ ಸುಪ್ರೇಮವರಳುವುದನ್ನೂ ಮತ್ತು ವಿರಹ ಸತ್ಯಕ್ಕಾಗಿ ಬಾಯಾರಿನಿಂತ ಸೌಂದರ್ಯದಂತೆ ದಿವ್ಯವಾದುದನ್ನೂ ಚಿತ್ರಿಸಿದ್ದಾರೆ.

**ಬೌದ್ಧಿಕ ಸ್ವಾಸ್ಥ್ಯ :** ಪ್ರೇಮಿಗಳು ಹತ್ತಿರವಿದ್ದಾಗ ಮೈಮರೆವು ಉಂಟು ಮಾಡುವ ಶೃಂಗಾರ, ಅವರು ಅಗಲಿದಾಗ ಅನಂಗರೂಪತಾಳಿ ಅವರ ಮನಸ್ಸು

ಪರಿಪಾಕಗೊಳ್ಳುವಂತೆ ಮಾಡುತ್ತದೆ. ಆ ಅಗಲಿಕೆಯ ವಿಪ್ರಲಂಭ ಶೃಂಗಾರವು ಬೇಂದ್ರೆ ಕಾವ್ಯದ ಮೂಸೆಯಲ್ಲಿ 'ಒಲವಿನ ಕಿಚ್ಚಾಗಿ' ಹಲವು ಭಾವ ಲಹರಿಯನ್ನು ತನ್ನ ಸಹೃದಯರಿಗೆ ನೀಡಿದೆ. ಒಂದಾಗಿದ್ದಾಗಿನ ರಸಭೋಗಕ್ಕಿಂತ, ಬೇರೆಯಾಗಿರುವಾಗಿನ ರಸೈಕ್ಯದಾಸೆ ರಸರೂಪಿ ಸ್ಥಿತಿಯಾಗಿರುತ್ತದೆ. ಅಂತಹ ಸ್ಥಿತಿಯಲ್ಲಿನ ವಿರಹಿಗಳ ದಗ್ಧ ಹೃದಯದ ರಸಿಕಮನದ ಹಾಡು ಅವರ ಅನುಭವದ ಪಾಡಾಗಿ ರಸಿಕರು ನುರಿಸಿ ಆನಂದ ಪಡುವ ಹಾಡಾಗಿವೆ.

ಬೇಂದ್ರೆಯವರು ಪ್ರೇಮಿಗಳ ವಿರಹದಲ್ಲಿ–ಪ್ರೇಮದ ಅನುಭವ ಸತ್ಯವಾಗಿ ಆ ಸತ್ಯ ಜೀವದ ಶಕ್ತಿಯಾಗಿ, ಆ ಪ್ರೇಮದ ನಿಷ್ಠೆ ಮಂಗಲಕರವಾಗಿ ಲೋಕ ಕಲ್ಯಾಣವಾಗುವಂತೆ–ವಿರಹಕಾವ್ಯಗಳನ್ನು ರಚಿಸಿದ್ದಾರೆ. ವಿರಹದಲ್ಲಿ ವಿಕೃತ ಭಾವೋದ್ರೇಕ ಸಾಧ್ಯವಿದೆ. ಆದರೆ ಆ ವಿಕೃತ ಭಾವೋದ್ರೇಕ ವ್ಯಕ್ತಿಯ ಜೀವ ನವನ್ನೆ ಹಾಳು ಮಾಡುವುದಲ್ಲದೆ, ಸಮಾಜ ಹಾಗೂ ರಾಷ್ಟ್ರವನ್ನು ವ್ಯಾಪಿಸಿ ರಾಷ್ಟ್ರದ ಬೌದ್ಧಿಕ ಜೀವನವನ್ನೇ ಹಾಳುಮಾಡುತ್ತದೆ. ಅಂತಹ ವಿಕೃತತನಕ್ಕೆ ಒಳಗಾಗದ ವಿರಹಿಣಿ, ಬೌದ್ಧಿಕಸ್ವಾಸ್ಥ್ಯ ಕಾಪಾಡಿಕೊಳ್ಳುವಂತೆ ಬೇಂದ್ರೆಯವರು ತಮ್ಮ ಕಾವ್ಯದಲ್ಲಿನ ವಿರಹಿಣಿಯನ್ನು ಸುಸಂಸ್ಕೃತ ಸಂಪನ್ನಳನ್ನಾಗಿ, ಸಾಮಾಜಿಕ ಮೌಲ್ಯಗಳನ್ನು ಕಾಪಾಡುವ ಜವಾಬ್ದಾರಿಯುಳ್ಳ ವ್ಯಕ್ತಿಯನ್ನಾಗಿ, ತನ್ನ ಮನಸ್ಸು ವಿರಹದಲ್ಲಿ ಕಾದು ಬೆಳಕಾಗುವ 'ಒಲುಮೆಯುಕಿಚ್ಚಿ'ನ ಕಾವ್ಯ ಕಲಾರಸಿಕಳನ್ನಾಗಿಸಿದ್ದಾರೆ.

**ಸಖಿ ! ಬಾರೆ ಬಾ ! :** ಅನಾದಿಕಾಮದ ಕ್ರಮ ಜೀವಲೋಕದಲ್ಲಿ ಮಾನವರಲ್ಲಿ ಪ್ರವಹಿಸುತ್ತಿರುವುದು ಒಂದು ಸಹಜ ಆಕರ್ಷಣೆಯಾಗಿದೆ. ಅದಕ್ಕೆ ಈಡಾದ ಗಂಡು, ಹೆಣ್ಣಿಗಾಗಿ ಬಯಸಿ ಕೂಗುವ ಕೂಗು–ಒಳಗಿನ ಸಖ ಜೀವದ ಕೂಗೆಂದು ಬೇಂದ್ರೆ 'ಸಖೀಗೀತ'ದಲ್ಲಿ ನುಡಿದಿದ್ದಾರೆ.

'ಎಂದಿನಿಂದಲೋ ಏನೋ ಒಳಗೊಂದು ಸಖ–ಜೀವ
ಸಖಿ! ಬಾರೆ ಬಾ!' ಎಂದು ಕೂಗುತಿದೆ.
'ಮುಂದಿನ ಪಥದಲಿ ಸಖಿಯಾಗು ಬಾ!' ಎಂದು
ನನ್ನ ಮನೋರಥ ಕೂಗುತಿದೆ.

**ಕೂಗಿ ಕರೆತಾರ‍ s ಸುಗ್ಗಿಯಾ :** ಹೀಗೆ ಪೂರ್ವದ ಅಗಲಿಕೆಯ ಗಂಡು ಹೆಣ್ಣು ಸೇರಿ ಸಂಸಾರ ಮಾಡುವಾಗ ಹಲವಾರು ಕಾರಣದಿಂದ ಅಗಲಿಕೆಯಾಗುತ್ತದೆ. ಆ ಯೌವ್ವನದ ಅಗಲಿಕೆ ಮಾಗಿಕಾಲದ ಬನದ ರೀತಿಯಿದೆ ಎಂಬ ರೂಪಕವನ್ನು 'ಒಲುಮೆಯ ಕಿಚ್ಚು' ಕವನದಲ್ಲಿ ನೀಡುತ್ತ, ಬೇಂದ್ರೆಯವರು–ಆ ವಿರಹಿಣಿ ತನ್ನ ಮನದ ಕೋಗಿಲೆಗೆ ಸುಗ್ಗಿಯನ್ನು ಕರೆದುತಾ ಎಂದು ಕೋರುತ್ತಿರುವುದನ್ನು ಚಿತ್ರಿಸಿದ್ದಾರೆ.

ಮಾಗಿಯ ಮೂಡಲಗಾಳಿ ತಾಗಿದ ಬನಧಾಂಗ
ಸಾಗ್ಯದ ನನ್ನ ಹರೆಯವು ಕೋಗಿಲಾ
ಕೂಗಿ ಕರೆತಾರ‍ s ಸುಗ್ಗಿಯಾ

ಆ ಅಗಲಿಕೆಯಲ್ಲಿ ಕಾಮ ತನ್ನ ಚಿರಂತನತೆಗೆ ಕಾವುಕೊಟ್ಟು, ಒಲವನ್ನು ಕಿಚ್ಚಾಗಿಸಿ, ಸುಪ್ರೇಮದ ಉದಾತ್ತತೆಯ ಆನಂದದ ಫಲನೀಡುತ್ತದೆ. ಆ ಸಂಕ್ರಮಣಸ್ಥಿತಿಯ ಪ್ರಿಯೆ ತನ್ನ ನಲ್ಲನಿಗಾಗಿಯೇ ಜೀವಹಿಡಿದುಕೊಂಡು ಅವನ ಜೊತೆ ಮೀಸಲಳಿಯದ ಮಳೆಯಲ್ಲಿ ಸವಿ ಉಣ್ಣುವುದು; ಆ ಅಗಲಿಕೆ, ತಡೆದುಕೊಂಡ ಪ್ರೇಮಸಾಮರ್ಥ್ಯದ ದ್ಯೋತಕವಾಗುತ್ತದೆ. ಅದು ಬಾತು ಕೋಳಿಯ ಹಾಗೆ ನಾತನೀರಲ್ಲಿ ಆಡುವುದಲ್ಲ, ನಿಜಪ್ರೇಮದ ಮೀಸಲಳಿಯದ ಮಳೆಗಾಗಿ ಕಾಯುವ ವ್ರತರೂಪಿಯಾದುದು :

ಬಾತುಗೋಳಿ ಹಾಂಗ ಜಾತಕದ ಜಾತ್ಯಲ್ಲ
ನಾತನೀರಾಗ ಅದರಾಟ, ಇದರೂಟ
ಮೀಸಲಳಿದ ಮಳಿಯಾಗ.

ಪ್ರೀತಿ, ಒಲುಮೆ ಎಂಬುದು ಕುಲುಮೆಯ ಕಿಚ್ಚಿನಂತೆ. ಅದರಲ್ಲಿ ಪ್ರಿಯೆಯ ಹುಲುಜೀವ ಕಾದು ಕಮರಿದರೂ, ಅವಳ ಒಳಜೀವ ನಿಜಪ್ರೀತಿಗಾಗಿ ಕಾದು ಬಾಳುತ್ತಿರುತ್ತದೆ :

ಒಲುಮೆಯ ನಚ್ಚೊಂದು ಕುಲುಮೆಯ ಕಿಚ್ಚವ್ವ
ಹುಲುಜೀವ ಕಾದು ಕಮರೀತು ಒಳುಜೀವ
ಒಲುಮಿಗೆ ಹ್ಯಾಂಗೋ ಬಾಳೀತು.

**ನಿಂತಾಳ ಕಾದು ನಿನಗಾಗಿ :** ಬೇಂದ್ರೆಯವರ ಕಾವ್ಯದ ಪ್ರಿಯೆಯು, ಶೃಂಗಾರ ಸಂಕೇತವಾದ ಗಿಣಿಯು ಜೊತೆ, ತನ್ನ ಮನದ ಗಿಣಿಯೊಳಗಿನ ಸಂಭಾಷಣೆಯಾಗಿ ಮಾತನಾಡುವುದು 'ಗಿಣಿ ಹೇಳ!' ಎಂಬ ಕವನದಲ್ಲಿದೆ. ವಿರಹಿಣಿಯ ಕವಳಮೆದ್ದ ಅಂದರೆ ಎಲೆಅಡಿಕೆ ಸವಿದ ತುಟಿ–ಗಿಣಿಯ ತುಟಿಯಂತೆ ಕಡುಕೆಂಪಾಗಿದೆ. ತನ್ನ ನಲ್ಲ ಚುಂಬಿಸದೆ ಉಳಿದ ತುಟಿಯನ್ನು ಹಿಂಡುತ್ತ, ತನ್ನ ಮನದ ಗಿಣಿಯನ್ನು ಕೇಳುತ್ತಾಳೆ : 'ಗಿಣಿ ಹೇಳ ಇವಳ ಮನವೆಲ್ಲಿ ಇರಬಹುದು'.

ತನ್ನನ್ನು ಒಂಟಿಯಾಗಿ ಬಿಟ್ಟು ಕಾಡಿಗೆಹೋದ ಕಾಂತನನ್ನು ಕುರಿತು 'ಕಾಂತ ನಿನ್ನವನೇನ' ಎಂದುಕೊಳ್ಳುತ್ತಾ; ಏಕಾಂತ ಬಯಸಿರುವ ವಿರಹಿಣಿ ತನ್ನ ಮನದ ಗಿಣಿಗೆ ತನ್ನ ಕಾದ ಬಗೆಯನ್ನು ಪ್ರಶ್ನಿಸುವಂತೆ ಕೇಳುತ್ತಾ : 'ಗಿಣಿ ಹೇಳ ನಿಂತಾಳ ಕಾದು ನಿನಗಾಗಿ' ಎಂದು ಕಾಯುವ, ಕಾದ ಮನವನ್ನು ಕಾವ್ಯಮಾಡುತ್ತಾಳೆ.

ಪುರುಷನ ಧ್ಯಾನ ಸರಸಿಗಾದುದು ಪರುಷಕಬ್ಬಿಣಕ್ಕೆ ಸ್ಪರ್ಶಮಾಡಿದ ಅನುಭವವಾಗುತ್ತದೆ. ಆ ನೆನೆದ ಹರುಷದ ದೇಹದ ರೋಮಾಂಚನವನ್ನು ಮನದ ಗಿಣಿಗೆ ಹೇಳುತ್ತಾ : 'ಗಿಣಿ ಹೇಳ ಹರುಷ ರೋಮಾಂಚ ತಳೆದಾಳ' ಎಂದು ತನ್ನ ಪ್ರಿಯನ ಧ್ಯಾನದ ರೋಮಾಂಚನವನ್ನು ಕಾವ್ಯವಾಗಿಸುತ್ತಾಳೆ.

**ಹುಬ್ಬಗೈಯ್ಯು :** ವಿರಹಿಣಿಯ ಮನದ ನುಡಿಯನ್ನು ಕಾವ್ಯವಾಗಿಸುವುದಕ್ಕಿಂತ; ಅವಳ ಕೈಗಲ್ಲ, ಹುಬ್ಬುಗೈ, ಗದ್ದ ಬೆರಳು, ತೆರೆದತೋಳು, ನಗುವು ಬಿಕ್ಕುಗಳು ಸೂಚಿಸುವ ನಲ್ಲನೊಡನೆಯ ಶೃಂಗಾರದ ಸ್ಮರಣೆಯ ಸಂಕೇತಗಳು–ಸಂಕೇತವಾಗಿಯೇ 'ಚಿತ್ರ' ಎಂಬ ಕವನದಲ್ಲಿ ನಿಂತು, ಚಿತ್ರದೊಡಲ ವಿರಹಿಣಿಯ ಚಿತ್ರ ಕೆ.ಕೆ.ಹೆಬ್ಬಾರರ ರೇಖಾಚಿತ್ರದಂತೆ ಮುದನೀಡುತ್ತದೆ. ವಿರಹಕಾವ್ಯದ ಬೆಡಗು ಇಲ್ಲಿ ಮಡುಗಟ್ಟಿದೆ.

ಕೈಗಲ್ಲ.........
(ಬಳಿಯಲ್ಲಿ ನಲ್ಲನಿಲ್ಲ !)

ಹುಬ್ಬುಗೈಯ್ಯು........
(ಕಾಣುವುದೆ ದೂರ ಮೈಯ್ಯು!)
ಗದ್ದ ಬೆರಳು........
(ಕಂಡಳೇ ನಲುಮೆದಿರುಳು !)
ತೆರೆದ ತೋಳು......
(ಒಂದಾದವೆರಡು ಹೋಳು !)
ನಗುವು ಬಿಕ್ಕು
(ಒಲುಮೆಯಲಿ ಹಾಸುಹೊಕ್ಕು !)

**ಬಾಳಾಗಿದೆ ಬದುಕಿನ ಸಾವು :** 'ಹೂ' ಹೂವಿನಂತಹ ಒಪ್ಪಿಗೆಯ ಮಾತು. 'ಊಂಹೂ' ಒಪ್ಪದ ನುಡಿ. ಒಂದರಲ್ಲಿ ಸಂಭೋಗಶೃಂಗಾರದ ಒಲವಿದ್ದರೆ, ಇನ್ನೊಂದರಲ್ಲಿ ವಿಪ್ರಲಂಭಶೃಂಗಾರದ ವಿರಹಛಾಯೆ ಇದೆ. ಒಂದರಲ್ಲಿ ತುಂಬು ಭಾವ, ಇನ್ನೊಂದರಲ್ಲಿ ಶೂನ್ಯ. 'ಹೂ' ಎಂದಾಗ ಕೋಗಿಲೆಯ ಉಲಿತದಂತೆ ಇಬ್ಬರ ದನಿ ಒಂದಾಗಿ ಇಬ್ಬರ ಮೈಯು ಹೂತುಂಬಿದ ಮಾವಾಗಿ, ಒಳಹೊರಗು ಹೂತುಂಬಿದ ಭಾವೈಕ್ಯ ಸಾಧಿತವಾಗುತ್ತದೆ. 'ಊಂಹೂ' ಎಂದಾಗ ವಿರಸದ ನುಡಿಯಾಗಿ, ಮನವೆಲ್ಲ ಬಾತುಕೊಳ್ಳುತ್ತದೆ. ಮೈತುಂಬ ದ್ವೇಷದ ಕಾವಿನ ಉರಿ ಎದ್ದು ಸಿಹಿ ಮಾವಿದ್ದದ್ದು ಕಹಿ ಬೇವಾಗುತ್ತದೆ. ಅದೇ ಹೆಣ್ಣು ಗಂಡಾಗಿದ್ದರೂ 'ಬಾಳಾಗಿದೆ ಬದುಕಿನ ಸಾವು' ಥೂ ಥೂ ಥೂ ಎಂಬ ಅಸಹ್ಯಭಾವದಿಂದ ಆಡುವ ಮಾತು 'ಹುಳುಹುಳುಕು ತೂತುಮಾತು' ಎಂಬ ಧ್ವನಿಯಲ್ಲಿ ಇಡೀ ವಿರಹದ ಹಲವು ಹರವು ಗೋಚರವಾಗುತ್ತದೆ. ಓಹ್, ಏನೋ ನೋವಾಗಿ ಮೊದಲಿದ್ದ ಹಾಡು ಕುಹೂಃ ಎಂಬ ಕೊಂಕು ಕಾಕಾಗುತ್ತದೆ.

ಆಗ ವಿರಹದಿಂದ ಕಂಪಿನ 'ಹೂ' ಅಣಗಿಸುವ ಒಣಗಿದ ಹೂವಾಗಿ; 'ಹೂ ಹೂ' ಇಲ್ಲವಾಗಿ ಬರಿ 'ಊಂಹೂ ಊಂಹೂ' ಎಂಬ ಸುತ್ತು ಮುತ್ತು ಬುಸುಗುಡುವ ಹಾವಾಗಿ ಪೂತ್ಕಾರಗೊಳ್ಳುತ್ತದೆ ಎಂದು 'ಹೂ-ಊಂಹೂ' ಕವನದಲ್ಲಿ ಬೇಂದ್ರೆಯವರು ವರ್ಣಿಸಿದ್ದಾರೆ :

ಬುಸುಗುಡುತಿವೆ ಸುತ್ತೂ ಮುತ್ತೂ ! ಹಾವೂ
ಅಣಗಿಸುತಿವೆ ಒಣಗಿದ ಹೂವೂ
ಎಲ್ಲಿರುವುದು ಆಗಿನ ಹೂಹೂ
ಊಂಹೂಽ ಊಂಹೂಽ ಊಂಹೂಽ.

**ದೊರಕದ್ದಕ್ಕಬಾಡತಿತ್ತ :** ವಿರಹ ಕೆಲವು ಕಾಲ ಉಳಿದು, ಮತ್ತೆ ಪ್ರೇಮ ಪಲ್ಲವಿಸಿದಾಗ, ಆ ವಿರಹಕ್ಕೆ ಅರ್ಥವಿದೆ. ಆದರೆ ವಿರಹ ಜೀವಂತ ವಿರಹವಾದಾಗ ಅಂತಹ ವಿರಹವನ್ನು ಜನಪ್ರಿಯ ಪ್ರೇಮಗೀತೆಯಾಗುವಂತೆ ರಚಿಸುವುದು ಸಮರ್ಥಕವಿಗೆ ಮಾತ್ರ ಸಾಧ್ಯ. ಅಂತಹ ಅಪರೂಪದ 'ನಗೀನವಿಲು' ಕವನದಲ್ಲಿ ವಿರಹಿಯಾದವಳ ದೇಹವನ್ನು ಉಲ್ಲಾಸದ ಕುಣಿತದ ನಗೆಯ ಸಂಕೇತ ನವಿಲಾಗಿ ಅವಳ ವಿರಹದಮನಸ್ಸು ಕೋಕಿಲವಾಗಿ ಹಾಡುವುದನ್ನು ಬಿಟ್ಟು ಬರೆ ಅವಳನ್ನು ನೋಡುವುದನ್ನು ಚಿತ್ರಿಸಿದ್ದಾರೆ. ಅವಳ ತುಂಬು ಶರೀರ ಮತ್ತು ಮುದುಡಿದ ಮನಸ್ಸನ್ನು ನವಿಲು ಮತ್ತು ಕೋಕಿಲವಾಗಿಸಿ ಇಡೀ ಕವನವನ್ನು ಒಂದು ರೂಪಕ ಕಾವ್ಯವಾಗಿಸಿದ್ದಾರೆ.

ಅವಳ ಮುಖದಲ್ಲಿ ನಗೆಯ ನವಿಲಿನ ಆಟವಿದೆ, ಕುಣಿತವಿದೆ. ಮುಗಿಲ ಕಡೆಗೆ ದೃಷ್ಟಿಯಿದ್ದು, ಮಳೆಯ ಬರವನ್ನು ಆಶಿಸುವ ಅಂದರೆ ಪ್ರಿಯನ ಬರವನ್ನು ಕಾಣುವ ಭರವಸೆಯ ನೋಟವಿದೆ. ಆ ನೋಟದಲ್ಲಿ ಆಶೆಯು ಮಿನ ಮಿನ ಮಿಂಚಿ, ಇಡೀ ನೆಲಜಲವನ್ನು ಬೆಳಗುವ ನಗೆಯಿದೆ. ಆ ನಗೆಯ ಕಣ್ಣಿನಲ್ಲಿ ಕುಣಿತವಿದೆ, ಒನೆದಾಟವಿದೆ :

ಕಣ್ಣಿನ್ಯಾಗ ಬಣ್ಣದ ನೋಟ
ತಕತಕ ಕುಣಿದಾಡತಿತ್ತ
ಕುಣೀತಿತ್ತ ಮಣೀತಿತ್ತ
ಒನಪಿಲೆ ಒನದಾಡತಿತ್ತ

ಆದರೆ ದೇಹ ಉಲ್ಲಾಸಮಯ ರೂಹು ಹೊಂದಿದ್ದರೂ, ಆ ಉಲ್ಲಾಸದಲ್ಲಿ ಯಾತನೆಯಿದೆ. ಅದು ಪ್ರಿಯನಿಲ್ಲದ ಯಾತನೆ. ಆ ಪ್ರಿಯ ಅವಳಲ್ಲಿ ರತಿಭಾವ ಉಂಟುಮಾಡಿ ಶೃಂಗಾರ ಪ್ರಭೆ ನೀಡಿ ಹೋದವನು. ಅವನಿಲ್ಲದ್ದು, ಅವನು

ದೊರಕದ್ದು ಅವಳಿಗೆ ಯಾತನೆಯಾಗಿ ಅವಳ ಮನ ಹಾಡದ ಕೋಕಿಲವಾಗಿದೆ. ಆದರೆ ಅವಳಯೌವ್ವನದ ಶರೀರ ನಗೆಯ ನವಿಲಾಗಿದೆ. ಆ ಕೋಗಿಲೆ ಅವಳ ಶರೀರವೆಂಬ ಮಾಮರದ ಕೊನೆಗೆ ಕೂತು ಹಾಡಲಾಗದ ಯಾತನೆಯಿಂದ, ಅವಳ ಮುಗಿಲ ಕಡೆ ನೋಡುವ ಭರವಸೆಯೇ ಮೈಯಾದ ಅವಳನ್ನೇ ನೋಡುತ್ತಿದೆ. ಕೋಗಿಲೆ ಎಂಬ ಮನಸ್ಸು ನೊಂದುಕೊಂಡು ಹಗಲಿರುಳು ಮಿಡುಕಿ ತೊಡಕಿ 'ಏನೋ ಒಂದನ್ನು' ಹುಡುಕುತ್ತಿದೆ. ಆ ಹುಡುಕಾಟದಲ್ಲಿ ತನ್ನಕೂಡ ರಮಿಸಿ ಸುಖ ತಂದ ಪ್ರೇಮಿ ತನ್ನನ್ನು ವಿರಹಿಯನ್ನಾಗಿ ಮಾಡಿ ಹೊರಟುಹೋದುದರಿಂದ, ಅವನಿಂದ ನಿರಂತರವಾಗಿ ದೂರವಿರಬೇಕಾದ ಅವಸ್ಥೆಯನ್ನು; ಅವನನ್ನು ಹುಡುಕಿ ಪಡೆಯುವ ಆಸೆಯನ್ನು 'ಏನೋ ಒಂದ ಹುಡುಕುತಿತ್ತ' ಎಂಬ ನುಡಿ ಧ್ವನಿಸುತ್ತದೆ. ಹುಡುಕುವ ಮನಸ್ಸು (ಕೋಗಿಲೆ) ಆ ಪ್ರಿಯ ದೊರಕದಿರುವುದಕ್ಕೆ ನಗೆಯ ನವಿಲನ್ನು ಬಾಡಿಸುತ್ತಿದೆ :

ಕಣ್ಣೀರಿನ ಮಳೆಯs ಕೂಡ
ತನ್ನ ದುಃಖ ತೋಡತಿತ್ತ
ತೋಡತಿತ್ತ ಬೇಡತಿತ್ತs
ದೊರಕದಕ್ಕ ಬಾಡತಿತ್ತ

ಹೀಗೆ ಸುಂದರ ಉಲ್ಲಾಸಭರಿತ ದೇಹ, ಹಾಗೂ ಪ್ರಿಯನಿಗಾಗಿ ಹುಡುಕುವ ಮಿಡುಕುವ ಬಾಡಿದ ಮನದ ಚಿತ್ರಣ, ವಿರಹ ಚಿತ್ರಣದ ಉತ್ತಮ ಕಾವ್ಯವಾಗಿದೆ.

**ಸುಳ್ಳು ಸುಖ ಮೆರೆಸಬಹುದೆ** ? : ಪತಿ ತನ್ನ ಪತ್ನಿಯ ನಿಜನಗೆ ಮತ್ತು ಸುಳ್ಳುನಗೆಯನ್ನು ಅರಿತು ನುಡಿದ ವಿರಹಗೀತೆ 'ಹುದುಗಲಾರದ ದುಃಖ' ವಾಗಿದೆ. ಪತಿಗೆ ನೋವಾಗಬಾರದೆಂದು ಬದುಕಿನ ಎಲ್ಲನೋವನ್ನು ನುಂಗಿ, ಹುದುಗಲಾರದ ದುಃಖವನ್ನು ತನ್ನ ನಗೆಯಲ್ಲಿ ಹುಗಿದಿರಿಸಿ ನಕ್ಕಾಗ, ಅವಳ ಜೀವದ ಗೆಳೆಯನಾದ ಪತಿ 'ಇನಿಸು ತಿಳಿಯದ ಮೂಢನೆಂದು ಬಗೆದೆಯೆ ನನ್ನ । ಇದು ಯಾವ ಊರ ಚದುರು ?' ಎಂದು ಪ್ರಶ್ನಿಸುತ್ತ ಅವಳ ನಿಜ ವಾದ ನಗೆಗೆ ಆಶಿಸುವ ಜೀವದ ಗೆಳೆಯನಾಗುತ್ತಾನೆ.

ಬೇಂದ್ರೆಯವರು ಬಡಶಿಕ್ಷಕರ ಬಾಳಿನಲ್ಲಿ; ಕೆಲಸಕ್ಕಾಗಿ, ವಿದ್ಯೆಗಾಗಿ ಧಾರವಾಡ, ಪೂನಾಗಳಲ್ಲಿ ಅಲೆದಾಡುತ್ತ ವಿರಹಯಾತನೆ ಅನುಭವಿಸುತ್ತ, ಕವಿಹೃದಯದ ಸೊಬಗಿನಿಂದ ತನ್ನ ಪತ್ನಿಯನ್ನು ನೆನೆದಹಾಡೇ ಉತ್ತಮ ವಿರಹಗೀತೆಗಳಾಗಿ ಕನ್ನಡಸಾಹಿತ್ಯಕ್ಕೆ ದೊರಕಿವೆ. 'our sweetest songs are those that tell of saddest thoughts' ಎಂದು ಶೆಲ್ಲಿ ಹೇಳಿರುವ ಮಾತಿನಂತೆ ಅವರ ದುಃಖದ, ವಿರಹದ ಗೀತೆಗಳು ಉತ್ತಮ ಪ್ರೇಮಗೀತೆ ಗಳಾಗಿವೆ.

ತನ್ನ ಪತ್ನಿಯ ಸುಳ್ಳುಸುಖ ಮೆರೆಸುವ ಮುಗುಳುನಗೆಯು ಹುಸಿನಗೆ ಯೆಂದೂ ಸುಖದ ಹೂನಗೆಯಲ್ಲವೆಂದೂ ತಿಳಿದಕವಿ ಪತ್ನಿಯನ್ನು ಪ್ರಶ್ನಿಸುವ ನುಡಿಯಲ್ಲಿ; ತನ್ನ ಮನದ ಪ್ರಶ್ನೆಯನ್ನೂ ಒಡ್ಡಿ, ವಿರಹಿಗಳೀರ್ವರೂ ಪ್ರಶ್ನಿ ಸುವ ಪ್ರಶ್ನೆಯಾಗಿಸಿದ್ದಾರೆ :

ಮುಗುಳುನಗೆಯರಳಿಸುತ್ತ ಕರಿಯಾಲಿ ಹೊರಳಿಸುತ
 ಸುಳ್ಳುಸುಖ ಮೆರೆಸಬಹುದೆ ?

ಮಮತಾಜಳನು ಹುಗಿದು ತಾಜಮಹಲನು ಕಟ್ಟಿ
 ನಿಜ ದುಃಖ ಮರೆಸಬಹುದೆ?

ಎಂದು ನಿಜದುಃಖ ಮರೆಸಲಾಗದ ಒಂದು ಅಪರೂಪ ಪ್ರತಿಮೆಯನ್ನು ದರ್ಶಿಸಿದ್ದಾರೆ.

**ಇನ್ನೂ ಯಾಕ ಬರಲಿಲ್ಲವ್ವಾ :** 'ಪ್ರಣಯಭಂಗದಿಂದ ಹುಚ್ಚುಹಿಡಿದ ಸೂಳೆಯೊಬ್ಬಳು ತನ್ನ ಉನ್ಮಾದದಲ್ಲಿ ಈ ಹಾಡನ್ನು ಹೇಳುತ್ತಾಳೆ' ಎಂಬ ಭಾವ ಸಂದರ್ಭಹೊಂದಿದ 'ಹುಬ್ಬಳಿಯಾಂವಾ' ಕವನವು

ಇನ್ನೂ । ಯಾಕ ಬರಲಿಲ್ಲವ್ವಾ । ಹುಬ್ಬಳ್ಳಿಯಾಂವಾ
ವಾರದಾಗ । ಮೂರ ಸರತಿ । ಬಂದು ಹೋದಾಂವಾ ॥

ಎಂಬ ಪಲ್ಲವಿಯನ್ನು ಹೊಂದಿ ಎಲ್ಲರೂ ಹಾಡುವ ವಿರಹ ಗೀತೆಯಾಗಿದೆ. 'ಜೋಗತೇರಿಗೆ । ಮೂಗುತಿ ಅಂತ ನನಽಗ ಅಂದಾಂವಾ' ಎಂದು ಹೆಮ್ಮೆ

ಪಟ್ಟು ನುಡಿಯುವ, ರಸಿಕ ಹುಬ್ಬಳ್ಳಿಯವನನ್ನು ನಂಬಿದ ಮನೋವಿಕಾರ ಹೊಂದಿದ ಸೂಳೆಯ ವಿರಹದ ನುಡಿಯ ಎಳೆಎಳೆಯಲ್ಲಿ – ಅಶ್ಲೀಲದ ಭಾವವಿಲ್ಲದೆ, ಆಹ್ಲಾದಮಯ ಉನ್ನತನೆಲೆಯ ಪ್ರೇಮರಸಾಯನವನ್ನು ಅನುಭವಿಸಿದ ಪ್ರಾಮಾಣಿಕ ಅಭಿವ್ಯಕ್ತಿಯಿದೆ.

ಇರು ಅಂದರ । ಬರತೇನಂತ । ಎದ್ದು ಹೊರಡಾಂವಾ
ಮಾರೀ ತೆಳಗ ಹಾಕಿತೆಂದರ । ಇದ್ದು ಬಿಡಾಂವಾ
ಹಿಡೀ ಹಿಡೀಲೆ । ರೊಕ್ಕಾತಗದು । ಹಿಡಿಹಿಡಿ ಅನ್ನಾಂವಾ
ಖರೇ ಅಂತ । ಕೈಮಾಡಿದರ । ಹಿಡꣳದ ಬಿಡಾಂವಾ

ಎಂಬ ಅಂತ್ಯಪ್ರಸಾದ ಗತಿಯಲ್ಲಿ ಅವನನ್ನು ನೆನೆಯುತ್ತಾ ಅಂವ ಅವಳಿಗೆಏನೆಲ್ಲ ಆನಂದ ನೀಡಿದ್ದ ಎಂದು ನುಡಿಯುವ ನಾಟಕೀಯ ಜೀವಂತಿಕೆ ಆ ಕವನದಲ್ಲಿದ್ದು ಒಂದು ಅಪರೂಪದ ವಿರಹಗೀತವಾಗಿದೆ. ಜಗದ ಒಂದು ಬಗೆಯ ಜೀವನದಲ್ಲಿನ; ಆ ಜೀವನಶ್ರದ್ಧೆಯ, ಸಾಮಾಜಿಕ ವ್ಯವಸ್ಥೆಯ ಸಾಚಾ ದರ್ಶನವನ್ನು ಆ ಕವನ ನೀಡುತ್ತ; ಸಾರ್ವಕಾಲಿಕ ಸತ್ಯವನ್ನು ಧ್ವನಿಸುತ್ತ ಎಲ್ಲ ಕಾಲದ ಎಲ್ಲ ಬಗೆಯ ಜನರು ಕೇಳಿ ಉಲ್ಲಸಿತರಾಗುವ, ಸಹಜಸತ್ಯಭಾವವನ್ನು ಹೊಂದಿದೆ. ಅವನು ಆ ವಿರಹಿಣಿಯನ್ನು 'ಎದಿಮ್ಯಾಗಿನ। ಗೆಣತಿನಮಾಡಿ। ಇಟ್ಟು ಕೊಂಡಾವಾ'. ಆದುದರಿಂದ ಆಜೀವ ಅವನನ್ನು ಹುಡುಕುತ್ತ 'ಹಾದೀ ಬೀದೀ ಹುಡುಕತೈತ್ರೇ । ಬಿಟ್ಟ ಎಲ್ಲಾ ಹ್ಯಾಂವಾ'.

**ನೆರಳು ನೆರೆದಿಹವಿಲ್ಲಿ :** 'ಮರೆಯುವೆಯೊ, ಅರಿಯುವೆಯೊ!' ಮತ್ತು 'ಎಲ್ಲಿರುವೆ ರಾಜಗಂಭೀರಾ' ಎಂಬುವು ವಿಧಿಯ ದುರ್ದೆಸೆಯಿಂದ, ಪರಿಸ್ಥಿತಿಯ ಒತ್ತಡದಿಂದ ವ್ಯವಸ್ಥೆಯ ಶಿಶುಗಳಾಗಿ ಪಾಟಲೀಪುತ್ರದ ರಾಜನನ್ನು ಮದುವೆಯಾದ ಹೆಣ್ಣುಗಳ ಕವನಗಳಾಗಿವೆ. ಅವನ ಹೃದಯಪಂಜರದ ಗಿಳಿಯಾಗಲು ಬಂದು, ಈಗ ನವರತ್ನಸಾರದ ಭವದಕಾಡಿನ ಅರಮನೆಯ ಬಂದಿಯಾದ, ಭೋಗಶೃಂಗಾರದ ಒಡಲಾಸೆಯಿದ್ದೂ ಇಲ್ಲದಂತಿರುವ-ಮುನ್ನೂರು ಸುಂದರಿ ಹೆಣ್ಣುಗಳ ರಾತ್ರಿಗೀತವಾಗಿ, ಉದಯಗೀತವಾಗಿ ವಿಪ್ರಲಂಭಶೃಂಗಾರದ ಕವನಗಳಾಗಿವೆ. ರಾತ್ರಿ ಗೀತವಾದ 'ಮರೆಯುವೆಯೋ, ಅರಿಯುವೆಯೋ!' ಕವನದ ಪಲ್ಲವಿಯಲ್ಲಿ :

ಎಲ್ಲಿ ಮರೆಯುವಿಯೋ !
ಇಲ್ಲ ಅರಿಯುವಿಯೋ ! ನಮ್ಮನ್ನs ॥

ಎಂದು ರಾಜನನ್ನು ನೆನೆಯುತ್ತ ಅವನಿಗೆ ತಮ್ಮ ಅರಿವಾಗಲೆಂದು, ತಮ್ಮನ್ನು ಮರೆತು, ತೊರೆಯಬೇಡವೆಂದು ಹಾಡುತ್ತಾರೆ. ಅವನ 'ಮೊದಲ ಸೋಂಕಿಗೆ ಇನ್ನೂ ನೆನವು ನವಿರಾಗುತಿದೆ' ಎಂಬ ನೆನಹಿನಲ್ಲಿ ಅವರ ಮನದ ಕಾವು ಇನ್ನೂ ಬಿಸಿಯಾಗಿರುವುದರ ಸೂಚನೆಯಿದೆ.

ಇರುಳು ಮುಸುಕಲು ಬಂದು, ನೆರಳು ನೆರೆದಿಹೆವಿಲ್ಲಿ,
ಕರುಣಿ ಬಾರೈಮಾರಾ । ನೀರಾ ।
ಚೆಲುವ ಗೊಂಬೆಗಳಲ್ಲಿ
ಒಲುಮೆ ಯುಸಿರನು ತುಂಬಿ
ಪೊರೆಯುವಿಯೋ ನಮ್ಮನ್ನಾ

ಎಂದು ತಮ್ಮ ಬದುಕಿನ ಸುಂದರ ಶೃಂಗಾರ ರಾತ್ರಿಯು : 'ಇರುಳು ಮುಸುಕಲು ಬಂದು, ನೆರಳು ನೆರೆದಿಹೆವಿಲ್ಲಿ' ಎಂಬಂತೆ ಬದುಕಿನ ಇರುಳಿನಲ್ಲಿನ ನೆರಳಿನಂತಾದ; ರೂಪ, ಆಕಾರ ಹಾಗೂ ಅರ್ಥರಹಿತ ಬದುಕಿನಂತಾದ ತಮ್ಮ ಹೀನಾವಸ್ಥೆಯನ್ನು ಧ್ವನಿಯಾಗಿಸುತ್ತ ನೊಂದ ಜೀವಿಗಳು ದುರಂತದಲ್ಲಿದ್ದಾರೆ. ಆ ಹೆಣ್ಣುಗಳು ಚೆಲುವ ಗೊಂಬಿಗಳಂತಾಗಿರುವದು ಅವರ ವಿರಹಾ ವಸ್ಥೆಯ; ಏಕಾಕಿತನದ ಬಂದಿಯಾಗಿ ಕಾಮುಭಿಕ್ಷೆಆಶಿಸುವ ಜೀವಚ್ಛವವಾದ ದೀನಸ್ಥಿತಿಯನ್ನೂ 'ಒಲುಮೆಯಕಿಚ್ಚ' ನ್ನೂ ಸಮರ್ಥವಾಗಿ ಧ್ವನಿಸುತ್ತ ವ್ಯವಸ್ಥೆಯ ಕ್ರೂರ ಚಿತ್ರ ನೀಡುತ್ತಾ ಕರುಣರಸವನ್ನು ಹುಟ್ಟಿಸುತ್ತದೆ.

**ಮೊಗ್ಗೆಯಾಗಿಯೆ ಇದೆ :** ನೆರಳೇ ತಾವಾಗಿ ರಾತ್ರಿಗೀತ ಹಾಡಿದ ಆ ಹೆಣ್ಣುಗಳು ಹಾಡುವ ಉದಯಗೀತ 'ಎಲ್ಲಿರುವೆ ರಾಜಗಂಭೀರಾ ।'. ಬೆಳಕಿದ್ದು ಬೆಳಕು ಸುಳಿಯದ ವ್ಯವಸ್ಥೆಯಲ್ಲಿರುವ ಅವರ ಹೀನಸ್ಥಿತಿಯನ್ನು 'ಹಾಳುದೇಗುಲದಲ್ಲಿ, ಗಾಳಿಗೋಳಿಡುವೊಲು ಉಸಿರಾಡುತಿದೆ ಜೀವಾ' ಎಂದು ಚಿತ್ರಿಸುತ್ತದೆ :

ಬೆಳಕ ಬೇಡುತಲಿದೆ, ಗಾಳಿ ಕಾಣದೆ ಬಾಡಿ
ಬಳ್ಳಿಯಾಗಿಹ ಜೀವಾ ;
ಮಲ್ಲಿಗೆಯಾದೆದೆ, ಮೊಗ್ಗೆಯಾಗಿಯೆ ಇದೆ,
ಎಲ್ಲಿರುವೆ ರಾಜಗಂಭೀರಾ–ನೀರಾ.

ಎಂಬುದು ಪ್ರೇಮದ ಬೆಳಕನ್ನು ಅರಸುತ್ತಿರುವ ಮನವನ್ನು, ಅದು ಸಿಗದೆ ನಿರರ್ಥಕವಾದ ಸ್ಥಿತಿಯನ್ನು ಬಿಂಬಿಸುತ್ತದೆ. ಅವರು ಮದುವೆಯಾದ ಒಂದೇ ಕಾರಣದಿಂದ 'ನಲ್ಲನೀರಡಿಸಿದೆ, ಕಾವೇರಿ ಆರಿದೆ' ಎಂದು ತಮ್ಮ ಒಲುಮೆಯ ಕಿಚ್ಚನ್ನೆಲ್ಲಾ ಧ್ವನಿಯಾಗಿಸಿ ತಮ್ಮ ಅಸಹಾಯಕತೆಯನ್ನೂ, ತಾವು ರತಿಭಾವ ಕಳೆದುಕೊಳ್ಳುತ್ತಿರುವ ಅವಸ್ಥೆಯನ್ನೂ ತಿಳಿಸಿದ್ದಾರೆ :

ತನ್ನ ಒಡವೆಯೆ ತನಗೆ, ಎರವಾಗಿ ಹೊರತಾಗೆ,
ನಿರ್ಜೀವವೀ ಜೀವಾ;
ಇಲ್ಲಿ ರಂಭೆಯರೆಲ್ಲಾ, ನಂಬಿ ಕುಳಿತಿಹರಲ್ಲೋ
ಎಲ್ಲಿರುವೆ ರಾಜಗಂಭೀರಾ–ನೀರಾ.

ಎಂದು ಮುನ್ನೂರು ನೀರೆಯರು ನಿರ್ಜೀವ ಸ್ಥಿತಿಯಲ್ಲಿ ರಾಜನನ್ನು ನಂಬಿ ಕುಳಿತ ನಂಬಿಕೆ ಕಂಡು ಅಯ್ಯೋ ಎನಿಸುತ್ತದೆ. ಬೇಂದ್ರೆಯವರು ಈ ಎರಡು ಕವನಗಳಲ್ಲಿ ನಿಸ್ಸಹಾಯಕರಾದ ಮುನ್ನೂರು ರಂಭೆಯರು ವ್ಯವಸ್ಥೆಯಲ್ಲಿ ಬಂದಿಯಾಗಿ ಕಾಮಭಿಕ್ಷೆ ಬೇಡುವ ಅಂದಿನ ಕ್ರೂರ ಸಾಮಾಜಿಕ ವ್ಯವಸ್ಥೆಯನ್ನು ಬಿಂಬಿಸುತ್ತ ವಿರಹದ ಕ್ರೂರಮುಖವನ್ನೂ ಅದರ ಭಯಾನಕತೆಯನ್ನೂ ಚಿತ್ರಿಸಿದ್ದಾರೆ.

'ಒಲುಮೆಯ ಕಿಚ್ಚಿ'ನ ಕವನಗಳಲ್ಲಿ ಬೇಂದ್ರೆಯವರ ಭಾಷೆಯು ವಿರಹಾವಸ್ಥೆಯನ್ನು ಚಿತ್ರಿಸುತ್ತಾ ಅದನ್ನು ಮೀರಿ ಕರುಣರಸವನ್ನು ಹರಿಸುವ ತಂತ್ರವನ್ನು ಸಾಧಿಸಿದೆ. ವೈಯಕ್ತಿಕ ನೆಲೆಯಲ್ಲಿ ಹುಟ್ಟಿದ ಒಲುಮೆಯ ಕಿಚ್ಚಿನ ಕವನಗಳು ದೇಶಕಾಲಮೀರಿ ಸಾರ್ವತ್ರಿಕ, ಸಾರ್ವಕಾಲಿಕ ಸತ್ವ ಹೊಂದಿದ ಒಲವಿನ ಹಾಡುಗಳಾಗಿವೆ. ಬೇಂದ್ರೆಯವರು ಆ ಕವನಗಳಲ್ಲಿ ಸಖಿಸಖಿಯರ ಪ್ರೇಮ ಪರಿಪಾಕಗೊಳ್ಳುತ್ತ ಸುಪ್ರೇಮವಾಗಿ ಅರಳಿ ಮಂಗಲಕರವಾಗಬೇಕೆಂದು ಆಶಿಸಿದ್ದಾರೆ.

# ವ್ಯಕ್ತಿ ವಿಶಿಷ್ಟ ಕವನಗಳು

ಬೇಂದ್ರೆಯವರು ನಾಡಿನ ಹಿರಿಯ ಚೇತನಗಳಿಗೆ, ಗುರುಗಳಿಗೆ, ಸ್ನೇಹಿತರಿಗೆ, ಸಹೃದಯರಿಗೆ ಮಣಿದ ಜೀವಿ. ಆ ವ್ಯಕ್ತಿಗಳು ತಮ್ಮ ಬದುಕಿನಲ್ಲಿ ಜಗತ್ತಿಗೆ ಕೊಟ್ಟ ಕೊಡುಗೆಯನ್ನೂ, ಸ್ನೇಹ ಪ್ರೀತಿಗಳನ್ನೂ ಬೇಂದ್ರೆಯವರು ಕಾವ್ಯವಾಗಿಸಿದ್ದಾರೆ.

**ಜಗವೆಲ್ಲ ಮಲಗಿರಲು ಇವನೊಬ್ಬನೆದ್ದ :** ಬುದ್ಧನು ಜನನಮರಣಕ್ಕೆ ನೋವುನಲಿವಿಗೆ ಕಾರಣ ಹುಡುಕುವ ಉರಿ ಹೊತ್ತಿಸಿಕೊಂಡು ಮಡದಿ ಮಕ್ಕಳನ್ನು ಬಿಟ್ಟು, ಸತ್ಯಶೋಧನೆಗಾಗಿ ಹೊರಟವನು. ಅದನ್ನು ಬೇಂದ್ರೆಯವರು 'ಬುದ್ಧ' ಕವನದಲ್ಲಿ ಚಿತ್ರಿಸಿರುವ ರೀತಿ ಹೀಗಿದೆ :

ಬುದ್ಧ, ಬುದ್ಧ–
ಜಗವೆಲ್ಲ ಮಲಗಿರಲು ಇವನೊಬ್ಬನೆದ್ದ;
ಮಡದಿ–ಮಗು ಮನೆ–ಮಾರು ರಾಜ್ಯ–ಗೀಜ್ಯ
ಹೊತ್ತಿರುವ ಉರಿಯಲ್ಲಿ ಆಯಿತಾಜ್ಯ.

**ಕನ್ನಡದ ಸವಿನುಡಿಯ ಬಾನ ಬೆಳಗುವ ಸೂರ್ಯ :** ಬೇಂದ್ರೆಯವರು ಕನ್ನಡದ ಆದಿಕವಿ ಪಂಪನನ್ನು ಕುರಿತು 'ಪಂಪನ ನೆನೆದು' ಎಂಬ ಕವನದಲ್ಲಿ ಅವನ ಕ್ಷಾತ್ರಗುಣ ಮತ್ತು ಕಾವ್ಯಗುಣವನ್ನು 'ಬರೆಯುವಕೆಯ್ಯು ಗಂಡುಗೆಡದೆ ಬೀರಕಡಗ ತೊಟ್ಟಿತು' ಎಂದು ವರ್ಣಿಸಿದ್ದಾರೆ. 'ಪಂಪನಿಗೆ' ಎಂಬ ಇನ್ನೊಂದು ಕವನದಲ್ಲಿ 'ಕನ್ನಡದ ಸವಿನುಡಿಯ ಬಾನ ಬೆಳಗುವ ಸೂರ್ಯ' ಎಂದು ಕನ್ನಡಕಾವ್ಯ ಸೂರ್ಯನನ್ನು ಬಣ್ಣಿಸುತ್ತ 'ಇಂದಿಗೂ ಮೊಳಗುತಿದೆ ದಿವ್ಯದುಂದುಭಿ ತೂರ್ಯ' ಎಂದು ಪಂಪನ ಕಾವ್ಯದುಂದುಭಿಯ ಮೊಳಗನ್ನು ನಮಗೆ ಕೇಳಿಸಿದ್ದಾರೆ. ಬೇಂದ್ರೆಯವರು 'ಅಲ್ಲಮಪ್ರಭು' ಕವನದಲ್ಲಿ 'ಶೂನ್ಯದಲಿ ಹುಟ್ಟುಗಟ್ಟಿತು ಹದುಳದೊಂದು ಹುಣ್ಣಿಮೆ' ಎಂದು ಅಲ್ಲಮನ ವಚನದ ಬಗ್ಗೆ ನುಡಿದಿದ್ದಾರೆ. 'ರತ್ನಾಕರ' ಕವನದಲ್ಲಿ ರತ್ನಾಕರನನ್ನು, ಅವನ ಕಾವ್ಯವನ್ನು ವರ್ಣಿಸುತ್ತ 'ಕೃತಿಗಳೊಳು ನಿನ್ನ ಶೃಂಗಾರ ಪಾವನ, ಗಂಗೆಯೊಲು; ರಸವು ಸಮರಸವು' ಎಂದಿದ್ದಾರೆ.

**ಆ ದಿವ್ಯ ಧ್ವನಿ ಕೇಳಿ :** 'ಶ್ರೀವಿವೇಕಾನಂದ ಶಿಖರ-ಪ್ರಗಾಥಾ'ವನ್ನು ಕುರಿತು 'ಈ ಪ್ರಗಾಥವು ಶ್ರೀವಿವೇಕಾನಂದರಿಗೆ ಅರ್ಪಿಸಿದ ಶ್ರದ್ಧಾಂಜಲಿ. ಅವರ ಚಾರಿತ್ರ್ಯ ಸಾಕ್ಷಾತ್ಕಾರದಿಂದ ಬಂದ ಆನಂದಲಹರಿ ಇದು' ಎಂದು ಭಾವ ಸಂದರ್ಭ ನೀಡಿದ್ದಾರೆ. ಪ್ರಗಾಥದಲ್ಲಿ ರಚಿಸಿರುವ ಶ್ರದ್ಧಾಂಜಲಿಯಲ್ಲಿ ಶ್ರೀ ವಿವೇಕಾನಂದರ ಧ್ವನಿ ಕೇಳಲು, ಏಳಲು ಕರೆ ನೀಡಿದ್ದಾರೆ : ನದಿಯ ಹಾಗೆ ತಾ ನಿನದಿಸುವುದು ಆ ದಿವ್ಯ ಧ್ವನಿ ಕೇಳಿ । ಏಳಿ, ಏಳಿ, ಏಳಿ ಎತ್ತರ ಕೇಳಿ, ಉತ್ತರ ಕೇಳೀ ಆ-ಬಿತ್ತರ ಕೇಳಿ.

**ಒಳಹದುಳವನು ಹದಮಾಡಿ :** ಬೇಂದ್ರೆಯವರು ಮುದ್ದಣನನ್ನು ಕುರಿತು ಅವನು ಹೊಸ ರೀತಿಯಲ್ಲಿ ಮಿದುಮಾತಿನಿಂದ ಕಾವ್ಯರಚಿಸಿದುದನ್ನು, ಕನ್ನಡಕ್ಕೆ ತನ್ನಮಾತಿನಿಂದ ಜೀವಕಳೆ ತಂದುದನ್ನು 'ಮುದ್ದಣ' ಕವನದಲ್ಲಿ ಬಣ್ಣಿಸಿದ್ದಾರೆ.

ಹಳಸಿ ತಂಗೂಳಾದ ರೀತಿಗಳ ಹೀಗಳಿಸಿ
ಬಳಬಳಸಿ ಸವಿಗೆಟ್ಟ ನಲ್ಗತೆಯ ರಸವೆರಸು
ಬಳಸಿ ಪೇಳಿದನು ಒಳಹದುಳವನು ಹದಮಾಡಿ
ತನ್ನ ಮಿದುಮಾತಿನಿಂದ

**ಜನಕ ಹಿಗ್ಗಿನಹಾಡು ನೀಡಾಂವ :** ಗುರುದೇವ ರವೀಂದ್ರನಾಥಠಾಗೂರರು ಇಡೀ ಭಾರತದ ಜನಮನದ ಕವಿ. ಅವರು ಈ ನಾಡಿನಲ್ಲಿ ಹೂವಾಗಿ ಅರಳಿದವರು. ಬಿಸಿಲಹಣ್ಣನ್ನು ಉಂಡು, ಬೆಳದಿಂಗಳನ್ನು ಕಂಡು, ಚಳಿ ಮುದ್ದು ಕೊಂಡವನು ಎಂದು ಅವರನ್ನು ಕಾವ್ಯಮಯವಾಗಿ ಬಣ್ಣಿಸಿದ್ದಾರೆ. ಅವನ ಹಾಡಿನ ಹಿಗ್ಗನ್ನು 'ಗುರುದೇವ' ಕವನದಲ್ಲಿ ಬೇಂದ್ರೆಯವರು ಈ ರೀತಿ ಕಂಡಿದ್ದಾರೆ :

ನುಡಿದು ಬೇಸತ್ತಾಗ! ದುಡಿದುಡಿದು ಸತ್ತಾಗ
ಜನಕ ಹಿಗ್ಗಿನ ಹಾಡು ನೀಡಾಂವಾ
ನಿನ್ ಹಾಂಗ ಆಡಾಕ ! ನಿನ್ ಹಾಂಗ ಹಾಡಾಕ
ಪಡೆದು ಬಂದವ ಬೇಕೊ ಗುರುದೇವಾ!

**ಮನಮೋಹನದಾಸ :** ಬೇಂದ್ರೆಯವರು ರಾಷ್ಟ್ರಪಿತ ಮಹಾತ್ಮಾಗಾಂಧಿಯವರನ್ನು ಕುರಿತು ಹಲವಾರು ಕವನಗಳನ್ನು ರಚಿಸಿರುವರು. 'ನೂರು ವರ್ಷಾತು (ಶಕ-ಪುರುಷನ ಶತಮಾನ)' ಕವನದಲ್ಲಿ ಗಾಂಧಿಯನ್ನು ಕುರಿತುಸುಡಿದ ನುಡಿ ಮಹಾತ್ಮನನ್ನು ತಿಳಿಯಿರಿ ಎಂದು ಸಾರಿ ಹೇಳುತ್ತಿದೆ.

ನೀನು ರಾಮನ್ನ ನೆನಿಸಿ, ರವಿ ಆದಿ.
ನಾವು ರಾಮಾಯಣ ನೆನಿಸಿ, ಕವಿ ಆದಿವಿ
ಇದು ಪವಾಡ. ಮನಮೋಹನದಾಸ ! ಶಕಪುರುಷ ನೀನು.

* * *

ನಾವು ಏನ ಮರತರೂ
ನೀನು ಬಾಳಿದೀ ಅಂತ ನಾವು ಬದುಕಿದ್ದೀವಿ
ಇದನ್ನ ಮರಿಯೋ ಹಾಂಗಿಲ್ಲಾ

* * *

ಗಾಂಧೀಯುಗದಾಗ ಉಸಿರಾಡಿಸಿದ ಮಂದಿ ನಾವು
ಬಾಳಿದ್ದು ಪುರಾಣಾತು, ಬದುಕೋದು ಇತಿಹಾಸ ಆತು.

* * *

ಇತಿಹಾಸ ಸಾರತ್ಯದ ನೂರು ವರ್ಷಾತು ಮಗನ್ಯ ಅಂತ.
ಸಣ್ಣ ಕಣ್ಣಿಗೆ ದೊಡ್ಡ ಸೂರ್ಯ ಕಂಡಾನು
ಸಣ್ಣಮನಸ್ಸಿಗೆ ಮಹಾತ್ಮ್ಯ ಒಪ್ಪಿಗಾಗೋದಿಲ್ಲ.

**ಅರವಿಂದನಾಭನ ಪಾದಾರವಿಂದಕ್ಕೆ :** ಶ್ರೀಮಾತಾರವಿಂದರ ತತ್ತ್ವದಿಂದ ಬೇಂದ್ರೆಯವರ ಮನಸ್ಸು ಪಾಕಗೊಂಡಿದೆ. ಅವರು ತಮ್ಮನ್ನು 'ಅರವಿಂದ ಮಯನಾದ ಮಾನಸವು' ಎಂದು ಕರೆದುಕೊಂಡು 'ಶ್ರೀಗುರುವರೇಣ್ಯ, ನೀನೆ ಶರಣ್ಯ' ಎಂಬ ಶರಣಭಾವದ ಕವನ ರಚಿಸಿದ್ದಾರೆ. ಸರ್ವಸಮರ್ಪಣ ಭಾವದಿಂದ 'ಅರವಿಂದನಾಭನ ಪಾದಾರವಿಂದಕ್ಕೆ' ಎಂಬ ಕವನ ರಚಿಸಿ ತಮ್ಮನ್ನು ಸಮರ್ಪಿಸಿಕೊಂಡಿದ್ದಾರೆ :

ಅರವಿಂದನಾಭನ ಪಾದಾರವಿಂದಕೆ ಹಸ್ತಾರವಿಂದವು ಬಾಗುತಿರೆ,
ನಯನಾರವಿಂದವು ಮುಚ್ಚಿಕೊಂಡಿರುವಾಗ ಹೃದಯಾರವಿಂದವು ಅರಳಲಿರೆ,
ಆಸ್ಯಾರವಿಂದವು ನಲಿವನು ಸೂಸುವ ತೆರ ನಿನಗೆ ಸೂಸಲಿ ಮಂಗಲವು
ಎಂದಿತು ಅರವಿಂದ ಪದಭೃಂಗ ಅರವಿಂದು ! ಅರವಿಂದಮಯವಾದ
ಮಾನಸವು.

**ನಿನ್ನ ನೋಟವೆ ಹಾಲು :** ಬೇಂದ್ರೆಯವರು ಶ್ರೀಮಾತಾ ಅವರನ್ನು ಪ್ರಾರ್ಥಿಸಿ ಹಲವಾರು ಕವನಗಳನ್ನು ರಚಿಸಿದ್ದಾರೆ. 'ಪಾದಪದ್ಮಕೆಪ್ರಾರ್ಥನೆ' ಎಂಬ ಕವನದಲ್ಲಿ ಅವರು ಮಣಿದು ಪ್ರಾರ್ಥಿಸುವ ಬಗೆ ಇಂತಿದೆ :

ಬೆಣ್ಣೆ ಹಾಲಲಿ ಏಳುವಂದದಿ ಎತ್ತು ನಿನ್ನಾ ಬಳಿಗೆ.
ಅಡಿಗಡಿಗೆ ನಾ ಮಣಿವೆ ತಾಯಿಯ ಪಾದ ಪದ್ಮಂಗಳಿಗೆ.

* * *

ಅಳಿಗೆ ಕತ್ತಲು, ಹುಲಿಗೆ ! ಹುಲುಸಿರಲಮ್ಮ ಬೆಳಕಿನ ಬೆಳೆಗೆ.
ಮಣಿವ ಬೆಳಗನೆ ತೊರೆ ಹರಿವ ಈ ಪಾದಪದ್ಮಂಗಳಿಗೆ.

'ತಾಯಿಯವರ ದೃಷ್ಟಿ ಸೋಂಕಿದಾಗಿನ ಎಚ್ಚರ' ಎಂಬ ಭಾವ ಸಂದರ್ಭ ಹೊಂದಿದ 'ಶ್ರೀಮಾತೃಶ್ರೀಗೆ' ಎಂಬ ಕವನದಲ್ಲಿ ಬೇಂದ್ರೆಯವರು ತಾನು ಕವಿಯಾದ ಎಚ್ಚರಭಾವವನ್ನು ಹಿಡಿದಿಟ್ಟಿದ್ದಾರೆ :

ನಿನ್ನ ನೋಟವೆ ಹಾಲು
ತಾಯಿ ನೀನು.
ಕಂಗಳಿಂದಲೆ ಕುಡಿವೆ
ಕೂಸು ನಾನು.
ಕಂಗಳಿಂದಲೆ ನುಡಿವೆ
ತಾಯಿ ನೀನು.
ನನ್ನ ಕಣ್ಣೇ ಕಿವಿಯು.

**ಕಣ್ಣು ಕಣ್ಗೆ ಮುತ್ತದು :** 'ಚೆನ್ನ' ಕವನದ ಭಾವಸಂದರ್ಭದಲ್ಲಿ 'ಗೆಳೆಯ ಮಧುರಚೆನ್ನರಿಗೂ ನನಗೂ ಇರುವ ಒಳಜೀವದ ಸಂಬಂಧವನ್ನು ಕುರಿತು ಬರೆದ ಭಾವಗೀತ' ಎಂದು ನುಡಿದಿದ್ದಾರೆ. ಅವರ ಸ್ನೇಹದ ಬಂಧವನ್ನೂ, ಅವರಿಬ್ಬರಲ್ಲಿದ್ದ ಪ್ರತ್ಯೇಕ ದೃಷ್ಟಿ ಲಕ್ಷಣವನ್ನು ಅಪೂರ್ವವಾಗಿ ಕಾವ್ಯದಲ್ಲಿ ಹೀಗೆ ಚಿತ್ರಿಸಿದ್ದಾರೆ :

ನನ್ನ ನಿನ್ನ ಬೆನ್ನ ಬಳಿ ವಿಶಾಲವೃಕ್ಷ ಬೆಳೆದಿದೆ
ಮುಗಿಲ ತುಂಬಿ ಉಳಿದಿದೆ.
ಗಾಳಿಯಂತೆ ಸುಳಿದಿದೆ.

ನನ್ನ ನಿನ್ನ ನೋಟ ಮಾತ್ರ ಎರಡು ದಿಕ್ಕಿಗೆಳೆದಿದೆ
ಬೇರೆ ಹಾದಿ ತುಳಿದಿದೆ.

**ನೀನು ಒಂದೇ ಬೆಳಕು :** ಮಾಸ್ತಿಯವರನ್ನು ಕುರಿತು 'ನಾನು-ನೀನು' ಎಂಬ ಕವನದಲ್ಲಿ 'ನಿನ್ನ ದರ್ಶನಪೂರ್ಣ' ಎಂದು ನುಡಿದು ಆನಂದ ಪಟ್ಟಿದ್ದಾರೆ. ತಮ್ಮನಂತೆ ತನ್ನನ್ನು ನೋಡಿಕೊಂಡ ಕನ್ನಡದಆಸ್ತಿ ಮಾಸ್ತಿಯವರನ್ನು ನೆನೆಯುತ್ತ 'ಅಣ್ಣ ಮಾಸ್ತಿಯವರಿಗೆ' ಎಂಬ ಕವನದಲ್ಲಿ ಅವರನ್ನು ಬಣ್ಣಿಸಿರುವ ರೀತಿ ಅನನ್ಯವಾಗಿದೆ.

ನೀನು ಒಂದೇ ಬೆಳಕು
ನಾನು ಹಲ ಬಣ್ಣ
ನಾನು ಬೆಳೆಯುವ ತಮ್ಮ
ನೀನು ಬೆಳೆದಣ್ಣ.

**ಮೂರ್ತಿವೆತ್ತ ತೆಂಗಾಳಿ :** ಬೇಂದ್ರೆಯವರು 'ಕವಿಶಿಷ್ಯ' ಕವನದಲ್ಲಿ 'ಮುಪ್ಪಿನಲಿ ಹರೆಯದ ಹಸಿರ, ಹಸುಳೆತನದಾಚೆಗುರ ಕುಣಿಕುಣಿಸಿ ಕುಣಿದು ಕುಣಿಸಿದ ಮೂರ್ತಿವೆತ್ತ ತೆಂಗಾಳಿ' ಎಂದು ಪಂಜೆಮಂಗೇಶರಾವ್ ಅವರನ್ನು ತನ್ನ ನುಡಿಯಲ್ಲಿ ಕುಣಿಸಿದ್ದಾರೆ.

'ತಮ್ಮ ನೆನೆವ!' ಎಂಬ ಕವನದಲ್ಲಿ 'ನಿಮ್ಮ ಜಿಜ್ಞಾಸೆಗೆಲ್ಲಿದೆ ಮುಗಿವು? ಪದಕಾದಿ?' ಎಂದು ಕೇಳುತ್ತ ಗೋವಿಂದಪೈ ಅವರಿಂದ ಪ್ರಾರಂಭವಾದ

ಸಂಶೋಧನ ಜಿಜ್ಞಾಸೆ ಬೆಳೆಯುವ ಸೂಚನೆ ನೀಡುತ್ತ, ಅವರ ಚಿಂತನ ಚಿರಂತನತೆಯನ್ನು ಸಾರಿದ್ದಾರೆ.

**ಮುತ್ತೈದೆತನವೇ ತುಲಸಿಯಜಾಜಿ :** 'ಸೌ॥ ಮುತ್ತೈದೆ, ತಿರುಮಲೆ ರಾಜಮ್ಮ!' ಕವನದಲ್ಲಿ ಬೇಂದ್ರೆಯವರು 'ಭಾರತಿ' ಕಾವ್ಯನಾಮದ ಅವರ ಸಾಹಿತ್ಯದಲ್ಲಿ ಸಂಗೀತ ಸಹ ನಂಟಾಗಿತ್ತು ಎಂದು ನುಡಿದಿದ್ದಾರೆ. ಶರ್ಮ ದಂಪತಿಗಳು 'ರಸಿಕ ದಾಂಪತ್ಯದಲ್ಲಿ ಆತ್ಮರತಿ !' ಕಂಡವರೆಂದಿದ್ದಾರೆ. ಅವರದು ಸೌಹಾರ್ದ ದಾಂಪತ್ಯ ಎಂದು ಮೆಚ್ಚಿ ನುಡಿದಿದ್ದಾರೆ :

ಷೋಕಿ ನಾಟಕವಲ್ಲ, ಶ್ರುತಿ ಬಹಳ ನಾಜೋಕು
ದಾಂಪತ್ಯ ಸೌಹಾರ್ದ, ಬೇಡಿಬಂದಿರಬೇಕು.

**ದಿಗ್ಗಜದ ತಗ್ಗನ್ನು ಯಾರಿನ್ನು ತುಂಬುವರು** ? ಬೇಂದ್ರೆಯವರು ಡಿ.ವಿ.ಜಿ. ಅವರನ್ನು ಭೀಷ್ಮರೆಂದು ಕರೆದು, 'ಆನೆಹೋದುದೆ ಬೀದಿ, ಅವರಿಗವರದೆ ಹಾದಿ !' ಎಂದಿದ್ದಾರೆ. ನಮ್ಮ ಡಿ.ವಿ.ಜಿ. ದಿವಿಜರು ಎಂದಿದ್ದಾರೆ; 'ಅವರ ಆಸ್ಥಾನವೇ ಸ್ವರ್ಗ!' ಎಂದು ಹೆಮ್ಮೆಪಟ್ಟಿದ್ದಾರೆ. 'ಡಿ.ವಿ.ಜಿ.' ಕವನದ ಈ ಕೆಲವು ಸಾಲುಗಳನ್ನು ನೋಡಿ :

ದಿವಿಜರಲ್ಲವೆ ನಮ್ಮ ಡಿ.ವಿ.ಜಿ. ಎಂಬುವರು
ದಿವಿಗೆ ಹೋದರೆ ? ಅವರ ಆಸ್ಥಾನವೇ ಸ್ವರ್ಗ !
ದಿನದಮಾತೇಮಂತ್ರ, ಋಷಿಗಳಿಗೆ ಯಾವರ್ಗ ?
ದಿಗ್ಗಜದ ತಗ್ಗನ್ನು ಯಾರಿನ್ನು ತುಂಬುವರು ?

## ಅನುಭಾವ ಗೀತೆಗಳು

**ಜೋಗಿ :** ಬೇಂದ್ರೆಯವರ 'ಜೋಗಿ' ಕವನದ ಜೋಗಿ ಸ್ವಯಂ ಕವಿಯೆ ಆಗಿ, ಅಲ್ಲಿ ತನ್ನ ಆತ್ಮದ ಸಂಭಾಷಣೆಯೊಂದಿಗೆ ಪರಮಾತ್ಮನನ್ನು ಅರಿಯುವ ಪ್ರಯತ್ನಮಾಡುವ ಒಂದು ಜೀವಸಂವಾದ ನಡೆದಿದೆ.

ಒಟ್ಟು ೧೨ ನುಡಿಗಳಿರುವ ಆ ಕವನದಲ್ಲಿ ಮೊದಲ ಐದು ನುಡಿಗಳು ವ್ಯಕ್ತಿಯುಕಾಣುವ, ನೇರವಾಗಿ ಅರ್ಥವಾಗುವ ಬದುಕಿನ ಹಾಗೂ ಧಾರ್ಮಿಕ ನಂಬಿಕೆಯ ಸಮೃದ್ಧಿ ಮತ್ತು ಭಯಾನಕತೆಯ ಚಿತ್ರವನ್ನು ನೀಡುತ್ತವೆ :

ಊರ ತುದಿಯ ಆ ಮೂರು ಬಟ್ಟೆ ಮುಗಿದಲ್ಲಿಕೊಳ್ಳವೆಲ್ಲಿ
ಹಳ್ಳ ಅಡಗಿ ಹರಿದಲ್ಲಿ, ತುಡುಗು-ದನ ತೊಂಡು ಮೇಯುವಲ್ಲಿ
ದಿಕ್ಕು ತಪ್ಪತಾರ, ತಪ್ಪಿ ಹೊಕ್ಕರs ಕಕ್ಕಾವಿಕ್ಕಿಯಾಗಿ
ಇರುಳು ಅಂತನs ಹಗಲs ಗೂಕತಾವ ಅಲ್ಲಿ ಜೋಡಿಗೂಗಿ.

ಎಂಬಲ್ಲಿ 'ಊರು ಹೋಗು ಅನ್ನುತ್ತದೆ, ಕಾಡು ಬಾ ಅನ್ನುತ್ತಿದೆ' ಎಂಬ ಭಾವದ ಮನಸ್ಸಿಗೆ ಪಕ್ಕಾದಜೋಗಿ ಊರತುದಿಯ ಆ ಮೂರುದಾರಿ ಸೇರು ವಲ್ಲಿನ ಕೊಳ್ಳ, ಅಲ್ಲಿ ಹಳ್ಳಅಡಗಿ ಹರಿದು, ತುಡುಗುದನ ತೊಂಡು ಮೇಯು ವುದು, ಅಲ್ಲಿ ಹಗಲೇ ಕತ್ತಲಂತಿರುವುದರಿಂದ ಜೋಡುಗೂಗಿಗಳು ಗೂಕು ಹಾಕುತ್ತ, ದಿಕ್ಕುತಪ್ಪಿ ಹೋದವರು ಕಕ್ಕಾವಿಕ್ಕಿಯಾಗುವುದು ಮುಂತಾದ ಸಂಕೇತವಿದೆ. ಆ ಸಂಕೇತ ಅವನ ಮನದ ಭಾವದ ಚಿತ್ರಣವೂ ಆಗಿ ಬಿಂಬಿಸುತ್ತದೆ.

ಅದನ್ನು ದಾಟಿ ಹೋದಾಗ ಶ್ಮಶಾನ ಸಿಗುತ್ತದೆ. ಅದರ ಎಡಗಡೆ ಒಟ್ಟು ಆಸೆಯ, ಕುತೂಹಲದ, ಆಕರ್ಷಣೆಯ 'ಕಾಮ ತನ್ನ ಹಚ್ಚಂಗಿ ಹಾಸಿಧಾಂಗೆಲ್ಲಿ ನೀರ ಪಾಚಿ। ಹೊಚ್ಚಿ ಹೊಂಡವನು ಮೆಚ್ಚ ಮಾಡತಾವೊ ಕಂಡ ಕಣ್ಣುಗಳಿಗೆ' ಎಂಬ ಕಾಮದ ಮೆಚ್ಚುತನ ತನ್ನ ಹಸುರುಪಾಚಿ ಚಾಚಿರುವುದನ್ನು ಬಣ್ಣಿಸುತ್ತಾ ಎಚ್ಚರಿಕೆಯ ಗಂಟೆ ಬಾರಿಸುತ್ತದೆ. 'ಪಾಚಿ ಸರಿಸಿದಾಗ ಕಪ್ಪು ನೀರು ಕರಿತಾವ ಒಳಗ ಬಳಿಗೆ'. ಇದು ಇಷ್ಟೆ ಎಂಬ ಕಾಮದಲ್ಲಿಯೇ ಪೂರ್ಣ ಆಸಕ್ತನಾದವನನ್ನು ಸಾವು ಬಳಿಗೆಕರೆಯುತ್ತದೆ. ಅದನ್ನು ಮೀರುವ ಬಲರೂಢಿಸಿಕೊಳ್ಳಬೇಕೆಂಬ ಮನೋಸ್ಥೈರ್ಯ ಹೊಂದಿದವನು ಮುಂದೆ ಸಾಗುವನೆಂದು ಆ ಸ್ಥೈರ್ಯ ಪಡೆಯಬೇಕೆಂಬ ಭಾವವು ಈ ಕಾವ್ಯದಲ್ಲಿದೆ.

ಅದರ ಮುಂದೆ ಬಲಕ್ಕೆ ಎಂಬ ಮಾತಿನಲ್ಲಿ ಬಲಭಾಗವೂ ಆಗಿ ನಮ್ಮ ಬಲಕ್ಕೆ ಬರುವ ಎಂಬ ಶ್ಲೇಷಾರ್ಥಹೊಂದಿ ಕಾಳಮ್ಮನಿಗಿರುವ ಹೊಲವಿದೆ. ಅದು ನಮ್ಮ ಉಪಸಂಸ್ಕೃತಿಯ ಹರಹನ್ನು ತೋರಿಸುತ್ತ, ಸಂಸ್ಕೃತಿಯ ಒಟ್ಟು ಅನುಭಾವಕ್ಕೆ, ಆ ಹೊಲದ ನಟ್ಟನಡುವಿರುವ ಹುಣಿಸಿಮರ ಏರಿ ನೋಡಬೇಕೆನ್ನುತ್ತದೆ. ಆಗ ದೂರದಲ್ಲಿ ಸಣ್ಣ ಏರಿಯ ಮೇಲೆ ಹತ್ತುಗಿಡದ ಗುಂಪೊಂದು ಕಾಣಿಸುತ್ತದೆ.

ಅಲ್ಲಿ ತೊಗಲ ಬಾವಲೀ ಚೀರತಾವ ಭರತಿ ಹಗಲಿನೊಳಗ
ಹಿಂಡು ಪಾರಿವಾಳ ಹೊಕ್ಕ ಹೊರಡತಾವ ಮತ್ತ ಒಳಗ ಹೊರಗ.
ಅಲ್ಲಿ ಹಬ್ಬಿ ಹರುಹ್ಯಾದ ಬೇವಿಗೇ ಸುತ್ತ ಅಮೃತ ಬಳ್ಳಿ
ಹಾಲ ಸುರವತಾವ ಆಲ, ಅಲ್ಲಿ–ಅಲ್ಲಾಡತಾವ ಅಳ್ಳಿ.

ಆ ಹತ್ತು ಗಿಡದ ಗುಂಪಿನಲ್ಲಿ ರಕ್ತಹೀರುವ ನಡುಹಗಲಲ್ಲಿ ಚೀರುವ ಬಾವಲಿ, ಶಾಂತಿಯ ಸಂಕೇತವಾದ ಪಾರಿವಾಳ, ಬೇವಿನಮರ, ಅದರ ಸುತ್ತ ಹಬ್ಬಿರುವ ಅಮೃತಬಳ್ಳಿ, ಹಾಲು ಸುರಿವ ಆಲ, ಜೊತೆಗೆ ಅಲ್ಲಿಯೇ ಅಲ್ಲಾಡುವ ಅಳ್ಳಿ – ಇವು ಸಮೃದ್ಧಿ ಮತ್ತು ಭಯಾನಕತೆ ಎರಡೂ ಏಕೀಭವಿಸಿರುವ ಚಿತ್ರ ವನ್ನು ನೀಡುತ್ತವೆ. ಅನಂತರ ಆ ವಾತಾವರಣದಲ್ಲಿಯ ಆಕರ್ಷಣೆ ಮತ್ತು ಭಯಾನಕತೆ ಇನ್ನೂ ಗಟ್ಟಿಗೊಳ್ಳುತ್ತ ಸಾಗುತ್ತದೆ :

ಅತ್ತಿಗಿಡಕ ಹತ್ಯಾವ ಹಲಸಿನ್ಹಾಂಗ ಬುಡಕು ಕೆಂಪು ಹಣ್ಣು
ಜೇನುತುಂಬಿ ತೊಟಗುಟ್ಟತಾವ, ಅದ ಬಯಸತಾವ ಕಣ್ಣು.
ಈ ತೋಪಿನ್ಯಾಗ ಬೆಳದ್ಯಾದ ಹ್ಯಾಂಗೋ ಮೂಲ್ಯಾಗ ತಪ್ಪಿ ಮಾವು
ಅದರಡಿಗೆ ಹುತ್ತ, ಅದರಾಗ ಐತೆ ಒಂದೇಳ ಹೆಡೆಯ ಹಾವು.

ಆ ಗಿಡದ ಗುಂಪಿನಲ್ಲಿರುವ ಅತ್ತಿಗಿಡದ ಬುಡಕ್ಕೆ ಹತ್ತಿದ ಜೇನು ತುಂಬಿ ತೊಟಗುಟ್ಟುವ ಹಣ್ಣು ಆಕರ್ಷಿಸುತ್ತದೆ. ಅತ್ತಿಗಿಡದ ಆ ಕೆಂಪುಹಣ್ಣು ಮರದ ಬುಡಬುಡಕು ಹಲಸಿನಹಾಗೆ ಹತ್ತಿದರೂ ಹಲಸಿನ ತೂಕವಿಲ್ಲ, ಹಲಸಿನಂತೆ ಜೇನು ಜೇನಲ್ಲ. ಆದರೆ ರುಚಿಯಿಲ್ಲದೆ ಇಲ್ಲ. ಜೊತೆಗೆ ಗೊನೆಯ ಕೆಂಪುಹಣ್ಣಿನ ತುಂಬ ತುಂಬುಹುಳುವಿದೆ. ಕವಿಗೆ ಭಯಾನಕತೆಯ ಮಧ್ಯೆ ಗೋಚರಿಸುವ

ಹ್ಯಾಂಗೋ ತಪ್ಪಿ ಹುಟ್ಟಿದ ಮಾವಿನಮರ ಕಂಡಾಗ ಆ ಗಿಡದ ಗುಂಪು ಈ ತೋಪು ಆಗುತ್ತದೆ, ಆತ್ಮೀಯತೆ ಹುಟ್ಟುತ್ತದೆ. ಆದರೆ ಅದರಡಿಯಲ್ಲಿ ಏಳು ಹೆಡೆಯ ಹಾವಿರುವ ಹುತ್ತವಿದೆ. ಅಂದರೆ ಆತ್ಮೀಯತೆಯ ಸಾಹಸಗಾಥೆಗೆ ಏಳುಹೆಡೆ ಸರ್ಪ ದಾಟಿ ಹೋಗಬೇಕೆಂಬ ಸೂಚನೆಯಿದೆ.

ಅನಂತರದ ನಾಲ್ಕು ನುಡಿಗಳು ಕನ್ನಡ ಕಾವ್ಯಪರಂಪರೆಯ ಉತ್ತಮ ಧ್ವನಿಯಾಗಿ ಕವಿಯ ಆತ್ಮ ಮಾತನಾಡುವ ನುಡಿಯಾಗಿ; ಕವಿಯ, ಕವಿಯ ಆತ್ಮದ ಸಂಭಾಷಣೆಯಾಗಿದೆ:

ಆ ಮಾವಿನೊಳಗ ಈ ಸುಗ್ಗಿಯೊಳಗ ಬಂದ್ವದ ಕೋಗಿಲೊಂದು
ತನ್ನ ಜೋಡಿ ಕರೆದ್ಹಾಂಗ ಕರಿತ್ವದ ನನ್ನ ಬಾರ ಅಂದು
ಕೂಗೇ ಕೂಗತ್ವದ ಕೂಗೆ ಕೂಗತ್ವದ ಗಿರಣಿ ಕರೆಯೊ ಹಾಂಗ
ತೆರಪು ಇಲ್ಲ ಒಂದಳತಿ ಕೂಗತದ ಬ್ಯಾಸರಿಲ್ಲಧಾಂಗ.

ಈ ಬದುಕಿನ ಎಲ್ಲ ಜಂಜಾಟದಲ್ಲಿ ಸದಾ ಆತ್ಮದ ಕರೆಗೆ ಎಚ್ಚರವಾಗಬೇಕು. ಆ ಎಚ್ಚರ ಬರುವುದು ಆತ್ಮದ ಸುಗ್ಗಿಯ ಕಾಲ. ಆ ಮಾವಿನಲ್ಲಿ ಈ ಸುಗ್ಗಿಯಲ್ಲಿ ಒಂದು ಕೋಗಿಲೆ ಬಂದು ತನ್ನ ಜೋಡಿಗಾಗಿ ನನ್ನನ್ನು ಬಾ ಎಂದು ಕರೆಯುತ್ತಿದೆ ಎಂದು, ಅದು ನಿರಂತರ ಕೂಗಾಗಿ 'ಒಂದಳತಿ ಕೂಗತ್ವದ ಬ್ಯಾಸರಿಲ್ಲಧಾಂಗ'. ಆ ಕೂಗಿನ ನಿರಂತರತೆ ಗಿರಣಿ ಕರೆಯುವ ಕೂಗಿನಂತೆ ಒಂದಳತಿ ಕೂಗುವ ಬ್ಯಾಸರಿಲ್ಲದ ಕೂಗಾಗಿದೆ. ಆ ಕೂಗು ಆತ್ಮದ ಕರೆ, ಕರ್ತವ್ಯದ ಕರೆಯೆಂಬಂತೆ; ಆತ್ಮದ ಕರ್ತವ್ಯ ಪರಮಾತ್ಮನತ್ತ ನಡೆದು ಆ ಕೂಗಿಗೆ ಓಗೊಡುವುದು–ಎಂಬಂತೆ ಸಮರ್ಥ ಧ್ವನಿಯನ್ನು ಧ್ವನಿಸುತ್ತದೆ.

ಆ ಅಂತರಾತ್ಮದ ಕರೆಗೆ ಓಗೊಟ್ಟಾಗ ತಿಳಿಯದ ಯಾವುದೋ ಕಂಪು ಆ ಆತ್ಮವನ್ನು ಎಳೆಯುತ್ತದೆ. ಅದು ತುಂಬಿಯಾಗಿ ಆ ಕಂಪಿನ ಸೆಳೆತಕ್ಕೆ ಸಿಕ್ಕು ಹುಚ್ಚಾಗಿ, ದಿಕ್ಕುತೋಚದಂತಾಗಿ ಕಂಪಿನ ಕರೆಯಿಂದ ಕಂಪಿನ ಸುತ್ತು ತಿರುಗುವುದೇ ಆಗಿದೆ. ಆ ಕಂಪು ಮಾವಾಗಿ ಕೋಗಿಲೆಯಾಗಿ 'ಬಂತು ಸುಗ್ಗಿ ಬಂದ್ವದ ಸುಗ್ಗಿ ಬರತ್ವದ ಸುಗ್ಗಿ' ಎಂದು ಕೂಗಿಕೂಗಿ ಹೇಳುತ್ತದೆ. ಆ ಕೂಗಿನಲ್ಲಿರುವ ಕ್ರಿಯಾಪದದ ಬಳಕೆಯ ಗತಿ; ಬಂತು ಸುಗ್ಗಿ, ಬಂದ್ವದ

ಸುಗ್ಗಿ, ಬರತ್ಯದ ಸುಗ್ಗಿ' ಎಂಬುದು ವರ್ತಮಾನ, ಭೂತ, ಭವಿಷ್ಯತ್ತಿನಲ್ಲಿದ್ದು –ಕವಿಯ ಮನದ ಏಕಬಿಂದುವಿನಲ್ಲಿ ಸಂಧಿಸುತ್ತಿರುವ ಸೂಚನೆಯಾಗಿದೆ :

ತಾರ ಪಂಚಮದಾಗ ಕೋಗಿಲಾ ಕೂಗತ್ಯದೊ ಜೋಗಿ
ಯಾವ ಬಣ್ಣ ಅದಕಾವ ಕಣ್ಣು ನಾ ನೋಡಲೇನು ಹೋಗಿ ?
ತೋಟವೆಲ್ಲ ಹೂವಾಗಿ ನಿಂತು ತೊಂಗೆಲ್ಲ ಗೊಂಚಲಾಗಿ
ಪಾಡು ಆಗತಾವ, ಹಣ್ಣು ಆಗತಾವ ಅದರ ಲಯಕೆ ತೂಗಿ.

ಎಂಬಲ್ಲಿ ಕವಿಯ ಆತ್ಮ, ಪರಮಾತ್ಮನ ಕೋಗಿಲ ಕರೆಗೆ ಓಗೊಡುತ್ತ ಅದು ಕವಿಯಾದ ಜೋಗಿಗೆ ಕೇಳುತ್ತದೆ: 'ತಾರ ಪಂಚಮದಾಗ ಕೋಗಿಲಾ ಕೂಗ ತ್ಯದೊ ಜೋಗಿ, ಯಾವ ಬಣ್ಣ ಅದಕಾವ ಕಣ್ಣು ನಾ ನೋಡಲೇನುಹೋಗಿ?'

ಆ ತಾರ ಪಂಚಮದ ಕೋಗಿಲೆಯ ಪರಮಾತ್ಮನ ಕೂಗಿಗೆ; ತನ್ನ ಮನದ ತೋಟವೆಲ್ಲಾ ಹೂವಾಗಿ, ತೊಂಗೆಲ್ಲಾ ಗೊಂಚಲಾಗಿ ಪಾಡಾಗಿ, ಹಣ್ಣಾಗಿ ಅದರಲಯಕ್ಕೆ ತೂಗುತಿದೆ ಎಂದು–ಆ ಕರೆಗೆ ತೂಗುಯ್ಯಲಿಡುವ ಆತ್ಮ ಪರಮಾತ್ಮನ ಜೊತೆಗೆ ಬೆರೆಯಲು ತೂಗುವ ಸ್ಥಿತಿಯ ಸಮರ್ಥ ಬಣ್ಣನೆ ಇದೆ. ಅದು ವ್ಯಕ್ತಿ ತನ್ನ ವೈಯಕ್ತಿಕ ಜೀವನದಲ್ಲಿ ಆಧ್ಯಾತ್ಮಿಕ ಎತ್ತರಕ್ಕೇರುವ ಮಾನಸಿಕ ಊರ್ಧ್ವಗಾಮಿತ್ವವನ್ನು ಸೂಚಿಸುತ್ತದೆ.

ಕವಿಯ ದೇಹವನ್ನು ಬಿಟ್ಟು ಆತ್ಮ ಪರಮಾತ್ಮನೊಡನೆ ತೂಗುವ ತೂಗುಯ್ಯಾಲೆಯ ಸಮರ್ಥ ಅಭಿವ್ಯಕ್ತಿ 'ತೊಂಗೆಲ್ಲ ಗೊಂಚಲಾಗಿ ಪಾಡು ಆಗತಾವ' ಎಂಬ ನುಡಿಯಲ್ಲಿದೆ. ಈ ಪಾಡು ಎಂಬ ಪದ ಆತ್ಮದ ಪರಿಪಕ್ವತೆಯ ಸ್ಥಿತಿಯನ್ನು ಧ್ವನಿಸುತ್ತದೆ. ಕಾಯಿಯಿದ್ದದ್ದು ಪಾಡಾಗಿ ಬಂದ ಪರಿಯನ್ನು ಅಭಿವ್ಯಕ್ತಿಸುತ್ತದೆ. ಮಾವಿನಮರದ ಸಂಕೇತ, ಅಲ್ಲಿನ ಕೋಗಿಲೆಯ ಕರೆ ಏಳುಹೆಡೆ ಸರ್ಪದ ಹುತ್ತ ಏರಿಹೋದ ಧೈರ್ಯ–ಆತ್ಮನನ್ನು ಮಾವಿನ ಹಣ್ಣಿನ ಪಕ್ವತೆಯ ಸ್ಥಿತಿಗೆ ತಂದಿದೆ. ಉತ್ತರಕರ್ನಾಟಕದಲ್ಲಿ ಮಾವು ದೋರು ಗಣ್ಣಿನ ಹಂತದಾಟಿ ಪಕ್ವತೆಯ ಹಂತ ತಲುಪಿದ ಸ್ಥಿತಿಯನ್ನು 'ಪಾಡು' ಎನ್ನುವರು. ಆಗ ಅದನ್ನು ಕಿತ್ತು ಅಡೆಹಾಕಬೇಕಾಗುತ್ತದೆ ಹಣ್ಣಾಗಲು. ಅಂತಹ Ripeness and readiness to be gathered ನ ಸ್ಥಿತಿಗೆ ತಲುಪಿದ್ದ ಆತ್ಮದ ಏರುಸ್ಥಿತಿ ಬಂದಿದೆ.

ಅದೇ ಸಂದರ್ಭದಲ್ಲಿ ಆತ್ಮ ಪರಮಾತ್ಮನನ್ನು ತಲುಪಲು ನಡೆಸಿದ ಹೋರಾಟ ಅದರ ಪಾಡನ್ನು ಅಂದರೆ Suffering, trouble ಅನ್ನು, Proper state, fitness ಗೆ ತಲುಪಿದ ಹಂತವನ್ನೂ ಸೂಚಿಸುತ್ತದೆ. ಅದು 'ಪಟ್ಟಪಾಡೆಲ್ಲವೂ ಹುಟ್ಟುಹಾಡಾಗುತ । ಹೊಸದಾಗಿ ರಸವಾಗಿಹರಿಯುತಿದೆ।' ಎಂಬ ಸ್ಥಿತಿಯೂ ಆಗುತ್ತದೆ. ಅಂತಹಪಾಡು ಆತ್ಮ ಪರಮಾತ್ಮನನ್ನು ಸೇರುವ, ತೂಗಿ ತೊನೆವ ಸಮರ್ಥ ಚಿತ್ರಣವಾಗಿದೆ.

ಅಂತರಾತ್ಮದ ಕರೆಗೆ ಓಗೊಟ್ಟ ಕವಿಯ ಆತ್ಮ ಇರುವ ಹಂಗನ್ನೆಲ್ಲ ಬಿಟ್ಟು ಪರಮಾತ್ಮನ ಕರೆಗೆ ತೂಗುತ್ತ, ಆ ಕರೆಯಿಂದ ತಲೆಕಾವಿನಲ್ಲಿ ಇಮ್ಮಾವಿನಲ್ಲಿ ಬಿಸಿಗಾಲ ನೂಗಿದಂತಾಗುತ್ತದೆ. ಆ ಕರೆಯ ಝಳದಲ್ಲಿರುವ ಆತ್ಮ ಅದರಿಂದ ತಪ್ಪಿಸಿಕೊಳ್ಳಲಾಗದ ತನ್ನ ಸ್ಥಿತಿಯಿಂದ ಮತ್ತೆ ಜೋಗಿಯನ್ನು ಕೇಳುತ್ತದೆ :

ಕೊಳಲ ನುಡಿಸಿಧಾಂಗ ಕೂಹೂಹುಹೂಹೂ ಉಲಿತ್ಯದೊ ಜೋಗಿ
ಬೇರೆ ಕೆಲಸದಾಗ ಮನಸು ತೊಡಗದೋ ನೋಡಲೇನು ಹೋಗಿ?

ಕೋಗಿಲೆಯ ಕರೆ ಇಹದ ಕೊಳಲನುಡಿಯಂತಾದಾಗ ಈ ಇಹದ ಕೆಲಸದಲ್ಲಿ ಮನಸ್ಸು ತೊಡಗದೆ 'ನೋಡಲೇನು ಹೋಗಿ' ಎಂದು ಜೋಗಿ ಕವಿಯನ್ನು ಅವನ ಅಂತರಾತ್ಮ ಕೇಳುತ್ತದೆ. ಅನಂತರದ ನುಡಿ ಕವಿಯ ಆತ್ಮವು ಜೋಗಿ ಹೇಳಿದ ಎಂದು ಅವನು ಹೇಳಿಕೊಟ್ಟನಾಮ ಜಪಿಸುವಾಗ ಆದ ಪರಿಣಾಮವನ್ನು ಕಾವ್ಯವಾಗಿಸುತ್ತದೆ :

ಬಂದೆ ಜೋಗಿ ಬಾ, ಬಾರೋ ಜೋಗಿ ಬಾ, ಏನು ಹೊತ್ತು ಬಂದಿ
ನೀನೆ ಹೇಳಿದಾ ನಾಮ ಜಪಿಸುವಾಗ ಬಂತೋ ಸುಗ್ಗಿ ಸಂಧಿ.
ತಲೆಯ ಯಾವುದೋ ನಾಡಿಯೊಳಗ ಸುರುವಾತು ಸುಗ್ಗಿಸೊಲ್ಲು
ಮುಂದೆ ಕೇಳಿದರ ಅದ್ವ ತುಂಬಿತೋ ಮೂಲೆ ಮೂಲೆಯಲ್ಲು.

ಇಲ್ಲಿಯವರೆಗೆ ಸಂಭಾಷಣೆಯಲ್ಲಿ ಕೇಳುತ್ತಿದ್ದ ಜೋಗಿ ಪ್ರತ್ಯಕ್ಷನಾಗುತ್ತಾನೆ. ಕವಿಯ ಆತ್ಮ ಕವಿಯನ್ನು 'ಬಂದೆ ಜೋಗಿಬಾ, ಬಾರೊ ಜೋಗಿಬಾ, ಏನು ಹೊತ್ತು ಬಂದಿ' ಎಂದು ಎಚ್ಚರಿಕೆಯಿಂದ ಅವನನ್ನು ಸ್ವಾಗತಿಸುತ್ತ, ನಿನ್ನ ನಿರೀಕ್ಷೆಯಲ್ಲಿಯೇ ಇರುವಾಗ ನಿನ್ನ ಅಗತ್ಯ ಇರುವಾಗ ಬಂದೆ. ನೀನು

ಹೇಳಿದ ಆತ್ಮ ಸಾಧನೆಯ ನಾಮ ಜಪಿಸುವಾಗ ಆ ಪರಮಾತ್ಮನ ಸುಗ್ಗಿ ಸಂಧಿ ಬಂತು. ಆ ಸುಗ್ಗಿಯ ಸೊಲ್ಲು ತಲೆಯ ಯಾವುದೋ ನಾಡಿಯಲ್ಲಿ ಸುರುವಾಗಿ ಕೇಳುತ್ತ ಕೇಳುತ್ತ ಅದೇ ಮೂಲೆಮೂಲೆಯಲ್ಲಿ ತುಂಬಿತು :

ಗುಡಿಗೆ ನಾನು, ಹೊರಟಾಗ ಕರೀತ್ತ್ಯದ ಕುಹೂಕ್ಕುಹೂ ಎಂದು
ಮನದ ಜಪದ ನಡುನಡುವೆ ನಡೀsತ್ತ್ಯದ ಓಂಕುಹೂ ಎಂದು.
ಕನಸಿನೊಳಗ ನಾ ಸ್ವರಾಕೇಳಿ, ಮಾಮರಾ ಆಗತೇನೋ
ಅಂತ ಭ್ರಮಾ ಆಗ್ಯsದ ಮನಕೆ ನೀ ಬಂದೆ ಜೋಗಿ ಏನೋ !

ಎಂದು ಭಗವಂತನ ಸಾನ್ನಿಧ್ಯ ದೊರೆತ ಭಾವವನ್ನು ಆ ಕೂಗು ತಾನು ಗುಡಿಗೆ ಹೊರಟಾಗ ಕುಹೂಕ್ಕುಹೂ ಎಂದು ಕರೆಯುತ್ತದೆ. ನನ್ನ ಮನದ ಜಪದ ನಡುನಡುವೆ ಓಂಕುಹೂ ಎಂದು ನುಡಿಯುತ್ತದೆ. ಆಗ 'ಕನಸಿನೊಳಗ ನಾ ಸ್ವರಾ ಕೇಳಿ, ಮಾಮರಾ ಆಗತೇನೋ' ಎಂಬ ಭ್ರಮೆ ಮನಸ್ಸಿಗಾಗಿದೆ.

ಮನದಕೋಗಿಲೆ ಓಂಕುಹೂ ಎಂದಾಗ ಮೈಯಾದ ಮಾಮರ ಜುಮ್ಮೆಂದಿದೆ. ಇಲ್ಲಿ ಗುಡಿ ಮತ್ತು ಮೈ ಭೌತವಾಗಿ ಮನಸ್ಸು ಆತ್ಮಧ್ಯಾನಭಾವದಲ್ಲಿ ಲೀನವಾಗಿ 'ನೀ ಬಂದೆ ಜೋಗಿ ಏನೋ!' ಎಂದು ಆಶ್ಚರ್ಯ ವ್ಯಕ್ತಪಡಿಸುವ ಸಂಭ್ರಮವಾಗುತ್ತದೆ. ಆ ಭ್ರಮೆಯಸಂದರ್ಭದಲ್ಲಿ ಆತ್ಮ ಕವಿಯಾದ ಜೋಗಿಯನ್ನು–ಗೊಂದಲ ನಿವಾರಣೆಗಾಗಿ ಪ್ರಶ್ನಿಸುವಂತೆ 'ಯಾವ ಸ್ವರ ಇದು, ಯಾವ ಕೋಗಿಲ, ಯಾವ ಮರವೋ ಏನೋ? ಯಾಕೆ ಹೀಗೆ ಒಂದೇ ಸಮನೆ ಕೂಗುತ್ತಿದೆ, ಇದಕ್ಕೇನು ಬೇನೆ ?' ಎಂದು ಕೇಳುತ್ತದೆ. ಆ ಕೂಗಿನಲ್ಲಿ ಒಟ್ಟು ಪರಿಸರ ಸುತ್ತಲ ಗುಡ್ಡ ಆ ಅಂತರಾತ್ಮನ ಕರೆಗೆ ನುಗ್ಗಾಗಿ ಹೋಗಿರುವಾಗ, ಅಂದರೆ–ಇಡೀ ಪ್ರಕೃತಿ ಪರಮಾತ್ಮನಲ್ಲಿ ಲೀನವಾದಾಗ ಬಿಸಿಕಾವು ಬೆವತು ತಣ್ಣಗಾದ ಹಾಗೆ, ಆತ್ಮವಾದ ತಾನು ಸಾಧನೆಯಸಿದ್ಧಿ ಪಡೆದ ಭಾವ ಹೊಂದಿದೆ ಎಂದು ಕವಿಯ ಆತ್ಮ ನುಡಿಯುತ್ತದೆ. 'ಬಿಸಲು ಕುಣಿದು ಬೆವತ್ತ್ಯದ, ಈಗ ಬಂದ್ಯದ ಮಳಿಯ ಹದಕs'.

ಹೀಗಿ 'ಜೋಗಿ' ಕವನ ತನ್ನ ತೆಕ್ಕೆಯಲ್ಲಿ ಅನುಭಾವವನ್ನು ಹಿಡಿದಿಟ್ಟುಕೊಂಡು ಓದುಗರ ಅಳವಿಗೆ ತಕ್ಕಷ್ಟನ್ನು ಹಂಚಿಕೊಡುವ ಶ್ರೇಷ್ಠ ಕವನವಾಗಿದೆ.

**ಸಣ್ಣ ಸೋಮವಾರ :** ಬೇಂದ್ರೆಯವರ 'ಸಣ್ಣ ಸೋಮವಾರ' ಧಾರವಾಡದ ಪರಿಸರದಲ್ಲಿ ಅರಳಿದ ಅವರ ಆಸ್ತಿಕಭಾವ ಬೆಳೆದು ಆಧ್ಯಾತ್ಮಿಕ ಅನುಭಾವ ವಾದುದರ ಬಗೆಯನ್ನು ತಿಳಿಹೇಳುವ ಕವನವಾಗಿದೆ. ಅವರ ಧಾರವಾಡದ ನೆಲೆಗಟ್ಟು ಭಾರತೀಯ ಧಾರ್ಮಿಕ ಹಿನ್ನೆಲೆಯಲ್ಲಿ ಹೊಮ್ಮಿ, ಒಂದು ಕಾಲದ ಮಿತಿಯ ಅನುಭವ ಸಾರ್ವಕಾಲಿಕವಾಗಿ; ಸೋಜಿಗದ ಚಿಕ್ಕಂದಿನ ನಂಬಿಕೆಯ ಭಾವ ಪ್ರಕೃತಿ ಸಹಜ ಪ್ರಕಾಶವಾಗಿ ಆ ಕವನದಲ್ಲಿ ಮೂಡಿದೆ :

ಬಂತಣ್ಣ ಸಣ್ಣ ಸೋಮವಾರ
ಕಾಣಬೇಕಣ್ಣ ಸೋಮೇಶ್ವರ ॥ಪಲ್ಲ॥

ಎಂಬ ಪ್ರಾರಂಭದ ನುಡಿಯಲ್ಲಿ ತನ್ನ ಎಪ್ಪತ್ತನೇ ವಯಸ್ಸಿನಲ್ಲಿ ಬಾಲ್ಯದ ನೆನಪನ್ನು ಮಾಡಿಕೊಳ್ಳುತ್ತಿರುವ ಕವಿಯಲ್ಲಿ ಆ ಸೋಮೇಶ್ವರನ ಕಾಣ್ಕೆಯ ಭಾವವಿದೆ. ತಮ್ಮ ಬಾಲ್ಯದ ಸುಂದರ ಚಂಚಲತೆ, ಮಕ್ಕಳಾಟ, ನೋಟ, ಹಸಿರು ತೋಟ, ಸುತ್ತಮುತ್ತಲ ಪಯಿರಿನ ಮಾಟ; ಮುಗಿಲು, ಮೋಡ, ಮಿಂಚು, ಗುಡುಗು, ಚಳಿಗಾಳಿಯ ಬೆಡಗಿಗೆ ಪಕ್ಕಾದ ಮನಸ್ಸಿದೆ. ಶ್ರಾವಣ ಮಾಸದಲ್ಲಿ ಕವಿಯಲ್ಲಿನ ಶ್ರವಣ ಪ್ರತಿಭೆ ಜಾಗೃತವಾದ ಪ್ರಕೃತಿಯಿದೆ. ಆ ಪ್ರಕೃತಿಯಲ್ಲಿ ಸೋಮೇಶ್ವರನ್ನು ನೋಡಲು ಹೋಗುವಾಗಿನ ಬಿಡುವು ಮನಸ್ಸು ಮತ್ತು ಮಕ್ಕಳಿಗೆ ಇಷ್ಟವಾದ ಫರಾಳದ ರುಚಿಯಿದೆ :

ನಾ ಮುಂದ ನೀ ಮುಂದ
ನಡಿಗೀಯು ತರತರದಿಂದ
ಸಾಲಿಗೆ ಸೂಟಿ, ಎಂಥ ಹ್ವಾರೆ ?
ಕಾಯಿ ಕಪ್ಪುರ ಕಟ್ಟಿಕೊಂಡು
ಬೆಲಪತ್ರಿ ಹಿಡುಕೊಂಡು
ಸಂಗಾಟ ಫರಾಳ ಬ್ಯಾರೇ.

ಆ ಸೋಮೇಶ್ವರನಿರುವ ಸೀಮೆ ಧಾರವಾಡದ ಏರುಇಳುವಿನ ಚಲನಶೀಲ ತೆಯ ಜೀವತುಂಬಿದ ಪ್ರಕೃತಿಯ ಬೀಡಾಗಿ, ಮಂಗಗಳು ಟೊಂಗೆಯಿಂದ ಟೊಂಗೆಗೆ ಏರಿ ನೀರಲಹಣ್ಣು ಉದುರಿಸುವ, ಗೂಡ್ಸುಗಾಡಿ ದುಡುದುಡು

ಬರುವ; ಅದರ ಶಬ್ದ ಕೇಳಿ ಮಕ್ಕಳು ರೈಲಾಗಿ ಠೀಕು ಜೋಡಿಜೋಡಿನಿಂತು ನಿಂತಲ್ಲೆ ಕುಣಿವ ಕುಣಿತವಿದೆ. ಆ ಜೀವಗತಿ ಆಸ್ತಿಕತೆಯ ಜೀವಂತಿಕೆಯನ್ನು ಬಿಂಬಿಸುತ್ತದೆ :

ತಗ್ಗಿನ್ಯಾಗ ಗಿಡದ ಗುಂಪು
ಹೊಂಡ್ಯದ ನೀರ ತಂಪು
ದೂರಿಂದ ಕಂಡರೂ ಸೊಂಪು

ಎಂಬ ವಾಸ್ತವ ಚಿತ್ರಣ ವಯಸ್ಸಾದ ಶರೀರದಿಂದ ಮಕ್ಕಳಾಗಿದ್ದಾಗಿನ 'ನಾಮುಂದ ನೀಮುಂದ' ಎಂದು ಗುಂಪಾಗಿ ನಡೆದ, ತಂಪಾದ ಮನದ ಆನಂದವನ್ನು 'ದೂರಿಂದ ಕಂಡರೂ ಸೊಂಪು' ಎಂದು ನೆನೆಯುತ್ತಿದೆ.

ಸೋಮೇಶ್ವರನನ್ನು ಕಾಣಲು ಹೋಗುವಾಗಿನ ಭಜನಿಯ ಮ್ಯಾಳದಧನಿ 'ಅಲ್ಲಾದೂರಾ ಅಲ್ಲಾಸನಿ' ಎಂಬ ಸೋಮೇಶ್ವರನ ಅನುಭವವಾಗಿ, ನಡುವೆ ಕೂಗುವ ಕೋಗಿಲೆಯ ಧ್ವನಿ ಆಧ್ಯಾತ್ಮಿಕ ಅನುಭವದ ಕೂಗಾಗಿ, ಮಾನಸ ಸರೋವರ ಹೊಕ್ಕು 'ಹರಹರ ಮಹಾದೇವ' ಎಂಬ ಭಾವದಲ್ಲಿ ಜೀವ ಈಸಾಡುವ ಅನುಭವ ನೀಡುತ್ತದೆ. ಆ ಕೋಗಿಲೆಯ ಧ್ವನಿ ವಾಸ್ತವಿಕ ಅರಿವನ್ನು ನೀಡುತ್ತ ಆಧ್ಯಾತ್ಮಿಕ ಸ್ತರಕ್ಕೊಯ್ಯುವ ಅಲೌಕಿಕ ಧ್ವನಿಯಾಗಿದೆ. ಭಜನೆಯ ಧ್ವನಿ ನಿರ್ದಿಷ್ಟತೆ ಸೂಚಿಸಿದರೂ ಸುತ್ತ ಬದುಕಿನ, ವಾಸ್ತವದ ಅರ್ಥ ಬಂಧದ ಜೊತೆಗೆ; ಆ ಕೋಗಿಲೆಯ ಧ್ವನಿ ದೇವರು–ಭಕ್ತ, ಜೀವ–ಮಹಾದೇವ ಸಂಬಂಧ ಕಲ್ಪಿಸುವ ಆಧ್ಯಾತ್ಮಿಕ ಸೇತುವಾಗಿ ಬಂದಿದೆ. ಆ ಧ್ವನಿ ಸಾಮಾನ್ಯತೆಯನ್ನು ಅಸಾಮಾನ್ಯತೆಗೆ ಕರೆದೊಯ್ಯವ ಸಾಧನದ ಸಂಕೇತವಾಗಿ ಕಾವ್ಯ ದಲ್ಲಿ ಮೂಡಿದೆ. ಆ ಸುತ್ತಲವಾತಾವರಣದಲ್ಲಿ ಸೋಮೇಶ್ವರನನ್ನು ಕಂಡಾಗ ಮನದ ಮೇಲಾಗುವ ಪ್ರಭಾವ :

ಗರ್ಭಗುಡಿಯೊಳಗ ಲಿಂಗ
ನಿದ್ದಿಯೊಳಗs ನೋಡಿಧ್ಹಾಂಗ
ಕಣ್ಣು ಮುಚ್ಚತಾವ ನಮೋ ಎಂದು
ಗವೀಯೊಳಗಿನ ದಾರಿ

ಹರದಾರಿ ಹರದಾರಿ
ಮಿಂಚಿತ್ತು ಚಂದ್ರಕ್ವಾರಿ ಒಂದು.
ನಿಂತ್ಯ ಮೈಯಾಗಿ ಖಂಬ
ಸೋರ್‍ಯಾವ ಜಂಬಗಿಂಬ
ಹಿಡಿದಾನ ಕೈಯ ಶಿವನೆ ಬಂದು.

ಎಂಬ ಆಸ್ತಿಕ ಭಾವದಿಂದ ನಮೋ ಎಂದು ಕಣ್ಣು ಮುಚ್ಚಿದಾಗ ಮನದ ಒಳ ಹಾದಿಯಲ್ಲಿ ಹರದಾರಿಯಲ್ಲಿ; ಶಿವನದಾರಿಯಲ್ಲಿ: ಹರದಾರಿ ಹರದಾರಿ ಹರಿದು ಸಾಕಷ್ಟು ಸಾಗಿದಾಗ ಚಂದ್ರನ ಬೆಳಕು ಗೋಚರಿಸಿ, ಮೈಕಂಬವಾಗಿ ನಿಂತು; ಜಂಬಗಿಂಬ ಎಲ್ಲಾ ಸೋರಿ – ಶಿವನೆ ಬಂದು ಕೈಹಿಡಿದ ಭಾವ ಮನದುಂಬುತ್ತದೆ. ಜೀವ ಮಹಾದೇವರ ಅರಿವು ಒಂದುಬಗೆಯ ನಿದ್ದೆಯೊಳಗೆ ನೋಡಿದ ಭಾವತಂದರೂ, ಅದರ ದಾರಿ ಹರದಾರಿಯ ರೀತಿಯಲ್ಲಿ ಕಾಣಿಸುವುದು ಭಗವಂತನನ್ನು ಅನುಭಾವಿಸುವ ಪರಿಯನ್ನು ಕಾವ್ಯವಾಗಿಸಿದೆ.

ಎಚ್ಚರಾದಾಗ, ನಿದ್ದೆಯಲ್ಲಿ ನೋಡಿದ ಹಾಗೆ, ಮತ್ತು ಶಿವನೆ ಬಂದು ಕೈ ಹಿಡಿದಿದ್ದಾನೆ ಎಂಬ ಭಾವ ಹುಚ್ಚುಚ್ಚಾರ ಎನಿಸಿ ಎಲ್ಲರ ಕೂಡ ಕೈ ಮುಗಿದು ಬೆಂಡು ಬತ್ತಾಸು ತಿನ್ನುತ್ತ ನುರಿಸಿಕೊಳ್ಳುತ್ತ ಜಾತ್ರೆಗೆ ಜಿಗಿದು ಹೋಗುತ್ತಿದ್ದೆವು ಎಂದು ಬೇಂದ್ರೆಯವರು ಹೇಳಿದ್ದಾರೆ. ಹಾಗೆ ಹೇಳುತ್ತ ಭಾವ ಅನುಭಾವದ ತೆಳುಪರದೆಯ ಅರಿವನ್ನು ತಿಳಿಯುತ್ತ, ತಿಳಿಸಲು ಪ್ರಯತ್ನಿಸುತ್ತ ಅವರು ತಮ್ಮ ಎಚ್ಚರದಲಿ – ಓದುಗರನ್ನು ಎಚ್ಚರಿಸುತ್ತಾ ಸಾಗಿದ್ದಾರೆ.

ಆ ಚಿಕ್ಕಂದಿನ ಅನುಭವ ಮತ್ತೊಂದು ಮಜಲಿನ ಅನುಭವಕ್ಕಾಗಿ ಶಾಲ್ಮಲಿಯ ರೂಪಕಕ್ಕೆ ಜಿಗಿಯುತ್ತದೆ. ಧಾರವಾಡದ ಸೋಮೇಶ್ವರನ ನೆಲದ ಶಾಲ್ಮಲಿ ಚಿಕ್ಕನದಿಯಾಗಿ ಹುಟ್ಟಿ ಬೆಳೆವ ರೀತಿಯನ್ನು ಬೇಂದ್ರೆಯವರು ಚಿತ್ರಿಸಿದ್ದಾರೆ. ಅವಳು ಬೆಳೆದು ಗಂಗಾವಳಿಯಾಗಿ ಗೋಕರ್ಣದ ಮಹಾಬಲೇಶ್ವರನನ್ನು ಕಂಡು ಸಾಗರ ಸೇರುವಾಗ ಇಡೀ ಪ್ರಕೃತಿಯೆ ಮಹಾಬಲ ವಾಗುತ್ತದೆ. ಸಣ್ಣ ಭಾವದ ಸೆಜ್ಜೆಸಾಲು ನಂದಿಹೋಗಿ ಹಿರಿದಾದ ಬೂರಲ ದೀಪಮಾಲೆಯಾಗಿ ಬೆಳಗಿ, ತನ್ನ ಗತ್ತಿನ ಸಪ್ಪಳಮಾಡದ ನಡಿಗೆಯಿಂದ ಜೀವಾತ್ಮ–ಪರಮಾತ್ಮನನ್ನು ಸೇರಿದ ಭಾವವಾಗಿ ಆಭಿವ್ಯಕ್ತಗೊಳ್ಳುತ್ತದೆ.

ಕೆಲವು ತಿಂಗಳ ಧಾನ್ಯ ಬೆಳೆಯಾಗಿ ಬೆಳೆದು, ದೀಪದಕುಡಿಯಂತೆ ಸೆಜ್ಜೆ ತೆನೆಯೆದ್ದು, ಅದು ಆಕಾಶ ಮುಖಿಯಾದರೂ ಅದಕ್ಕೆ ಅಸಾಮಾನ್ಯತೆಯ ಎತ್ತರಕ್ಕೇರುವ ನಿಲುವಿಲ್ಲ, ಆ ಎತ್ತರಭಾವದ ಊರ್ಧ್ವಗಾಮಿತ್ವದ ಸಂಕೇತ ವಾಗಿ ಬೂರಲಮರವಿದೆ. ಬೂರಲಮರ ಹೂತು, ದೀಪಮಾಲೆಯಂತೆ ಗತ್ತಿನಿಂದ ಸಪ್ಪಳಿಲ್ಲದೆ ಬೆಳಗುವ ರೀತಿ ಬೆಳಗಬೇಕು. ಮಹಾಬಲನನ್ನು ಕಾಣಬೇಕು. ಗೋಕರ್ಣದ ಮಹಾಬಲನನ್ನು ಕಾಣಲು ಶಾಲ್ಮಲಿ ಗಂಗಾವಳಿಯಾದಂತೆ ಸೆಜ್ಜೆಧಾನ್ಯದ ವ್ಯಕ್ತಿ ವಿಕಾಸಹೊಂದಿ ಬೂರಲವೃಕ್ಷವಾಗಿ ಹೂತು ಮೇಲ್ಮುಖದ ಬೆಳಕು ಕಾಣುವ ಬೆಳಕಾಗಬೇಕು ಎಂಬ ಭವ್ಯರೂಪಕ ನೀಡಿದ್ದಾರೆ:

ಶಾಲ್ಮಲಿ ಸಣ್ಣ ಬಾಲಿ
ಕಿವಿಯಲ್ಲಿ ತಾಳೆ ವಾಲಿ
ಗರಿಗರಿ ಬನದಾಗ ಅಡಗಿ,
ಗಂಗಾ ಹೊಳಿಯಾಗಿ
ಸಾಗರ ಬಿದ್ದು ಸಾಗರಕಾಗಿ
ಹೊರಟಾಳ ಗೋಕರ್ಣಕಡಿಗಿ.
ಬೂರಲ ದೀಪಮಾಲಿ
ನಂದಿಸಿ ಸೆಜ್ಜಿ ಸಾಲಿ
ಗತ್ತಿನ್ಸ ಸಪ್ಪಳಿಲ್ಲದ ನಡಿಗಿ.

ಹಾಗೆ ತನ್ನ ಚಿಕ್ಕಂದಿನ ಭಾವ ಬೆಳೆದು ಸುತ್ತಲ ಪ್ರಕೃತಿ ಬೂರಲ ದೀಪಮಾಲೆಯಾಗಿ ಸೆಜ್ಜಿ ಸಾಲುಭಾವದ ಕಿರಿತನ ನಂದಿ, ಸಾಗರಬಿದ್ದು ಸಾಗರವಾಗುವ ಅಲೌಕಿಕತೆಯ ಭಾವ, ಗತ್ತಿನ ಸಪ್ಪಳಿಲ್ಲದ ನಡಿಗೆಯಾಗುತ್ತದೆ. ಆ ಗತಿಯಲ್ಲಿ ಶಿವದರ್ಶನವಾದ ಬಗೆಯನ್ನು 'ಶಿವರಾತ್ರಿ ಬೆಳಕೆ, ಬೆಳ್ಳಬೆಳಗು, ಕೈಲಾಸಾನೆ ಹೊರಗು ಒಳಗು' ಎಂಬ ನುಡಿಗಳಲ್ಲಿ ಮೂಡಿಸಿದ್ದಾರೆ.

ಅಲೌಕಿಕತೆಯ ಭಾವಲೋಕದಿಂದ ಹೊರಬಂದು ಎಚ್ಚರಗೊಂಡ ಬೇಂದ್ರೆಯವರು ವಾಸ್ತವದ ಚಿಕ್ಕಂದಿನ ಅನುಭವದ, ಹಿರಿಯರ ಸಹಜ

ಮಾತಿನ ಹಾದಿಹಿಡಿದು ನಮ್ಮ ಖ್ಯಾಲಾ ಅಲ್ಲೇ ಸುತ್ತಾಡುವ ಬಗೆಯನ್ನು ಹೇಳಿದ್ದಾರೆ, ಹಾಗೆ ಹೇಳುತ್ತ ಮತ್ತೆ ಭಾವಲೋಕಕ್ಕೆ ಜಿಗಿದು ಒಳಹೊರಗು ಒಂದಾಗುವ; ಭಾವ ಅನುಭಾವ ಒಂದಾಗಲೆಳಸುವ ಬಗೆಯುನ್ನು ಕಾವ್ಯವಾಗಿಸಿದ್ದಾರೆ.

ಭಾೞವಾೞ ಇದ್ಧಾಂಗ ದೇವಾ
ಹೇಳಿದ್ರು ಹಿರಿಯರು
ಅಲ್ಲೆ । ಸುತ್ತಾಡತಾವ ನಮ್ಮ ಖ್ಯಾಲಾ.
ಎಣಿಸಿದರ ಏನೋ ಕನಸ
ಕಂಡ್ಹಾಂಗ ಅನಸ್ತೞದ
ಕಣ್ಣು । ಆಗ್ತಾವ ಹ್ಯಾಂಗೋ ತೇಲುಮೇಲಾ.

ಆಧ್ಯಾತ್ಮಿಕ ಭಾವ, ಕವನ ಬೆಳೆದಂತೆ ಕವಿಗಾದ ಒಟ್ಟು ಅನುಭಾವದ ಭಾವ ಪ್ರಪಂಚವಾಗಿ 'ಎಣಿಸಿದರ ಏನೋ ಕನಸ ಕಂಡ್ಹಾಂಗ ಅನಸ್ತದ ಕಣ್ಣು । ಆಗ್ತಾವ ಹ್ಯಾಂಗೋ ತೇಲು ಮೇಲಾ' ಎಂಬಲ್ಲಿ ದಟ್ಟವಾಗಿದೆ.

ಚಿಕ್ಕಂದಿನ ನೆನಪು ; ನೆನಪಿನ, ಮನದ ಒಳಕೋಣೆಯಲ್ಲಿ (ಓರಿಯೊಳಗ) ಅನುಭಾವವಾಗಿ ಎಣ್ಣೀದೀಪ ಮಿಣುಗಿದಂತೆ ಶಾಂತವಾಗಿ ಉರಿದು ಬೆಳಕಾಗಿದೆ. ಅಲ್ಲಿ ಬೆಳಕಿರುವುದರಿಂದ ಆ ಕಾಲ ಎಲ್ಲಿಯೂ ಹೋಗಿಲ್ಲ ಅದು ಇಲ್ಲೆ ಇದೆ ಎಂದು; ಪ್ರತ್ಯಕ್ಷನೋಡಿದ್ದ, ಕಂಡ ನೆನಪು ಆಧ್ಯಾತ್ಮಿಕ ನಿರೂಪಣೆಯಾಗಿ ಅನುಭಾವಕಾವ್ಯವಾಗಿ ಹರಿದಿದೆ. ಆ ಆನಂದಭಾವದಲ್ಲಿ ಕವಿ ಹಾಡಿದ್ದಾರೆ:

ನೆನಪಿನ ಓರಿಯೊಳಗ
ಮಿಣುಕ್ತಾವ ಎಣ್ಣೀದೀಪ
ಎಲ್ಲೆ । ಹೋದಾವೊ ಗೆಳೆಯಾ ಆ ಕಾಲಾ ?

ಬಂತಣ್ಣ ಸಣ್ಣ ಸೋಮವಾರಾ.
ಕಾಣಬೇಕಣ್ಣ ಸೋಮೇಶ್ವರಾ.

# ಸಾಹಿತ್ಯಸಿದ್ಧಿ : ನಾಟಕಗಳು

ಬೇಂದ್ರೆಯವರು ಕವಿಯಾದಂತೆ ನಾಟಕಕಾರರೂ ಆಗಿದ್ದಾರೆ. ಅವರು ಸಮಾಜವನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ, ಸಮಾಜದ ವಿವಿಧ ಬದುಕಿನ, ವಿವಿಧ ಮುಖದ ಜನಗಳ ಮಾತು, ಆ ಜನರ ವೃತ್ತಿ ಪ್ರವೃತ್ತಿಯಂತೆ ರೂಪುಗೊಂಡ ಶಬ್ದಶಕ್ತಿಯನ್ನು ನಾಟಕವಾಗಿಸಿದ್ದಾರೆ. ಬೇಂದ್ರೆಯವರ ಕಾವ್ಯದಂತೆ ನಾಟಕವು ತನ್ನದೇ ಆದ ದೃಶ್ಯ, ಪ್ರಯೋಗ, ಮಾತಿನಜಾಲ, ಅರ್ಥವಿಸ್ತಾರ ಹೊಂದಿದ್ದು-ಇತರರು ಅನುಕರಿಸುವ ಮನಸ್ಸಾದರೂ ಅನುಕರಿಸಲಾಗದ ಬೇಂದ್ರೆ ಮಾರ್ಗದಲ್ಲಿದೆ. ನಾಟಕಗಳಲ್ಲಿ ಬೇಂದ್ರೆಯವರ ಪಾತ್ರಗಳು ಜೀವಂತ ಜನರೇ ನುಡಿದಂತಿದ್ದು ಸಹಜತೆಯನ್ನು ಮೈಗೂಡಿಸಿಕೊಂಡಿವೆ. ಬೇಂದ್ರೆ ಮರೆಯಲ್ಲಿದ್ದು ನಮ್ಮಂತೆ ನಾಟಕನೋಡಿ ಆನಂದಿಸುವ ಪ್ರೇಕ್ಷಕನಾಗಿರುವುದು ಅವರ ನಾಟಕದ ವೈಶಿಷ್ಟ್ಯವಾಗಿದೆ. ಅವರ ನಾಟಕಗಳಲ್ಲಿ ಹಾಸ್ಯ, ಮಾತಿನ ಜಾಣ್ಮೆಯ ಜೊತೆಗೆ ಜೀವನವಿದೆ. ಬೇಂದ್ರೆ ಕಾಲದ ಫೋಟೋ ಆಲ್ಬಂನಂತಿವೆ ಅವರ ನಾಟಕಗಳು. ಗತಕಾಲದ ರಾಜರ ನಾಟಕವಾದ ಸಾಯೋಆಟ, ಜಾತ್ರೆಯಲ್ಲಿ ಅಡಗಿರುವ ತತ್ವ-ರಾಜದಿರಿಸು ತೆಗೆದು ವೇಷಭೂಷಣ ಬದಲಾಯಿಸಿದರೆ ಇಂದಿನ ಜನನಾಯಕರ, ಇಂದಿನ ಸಾಮಾಜಿಕ ವ್ಯವಸ್ಥೆಗೆ ಹಿಡಿದ ಕನ್ನಡಿಯಾಗಿ ಸದಾ ಹಸಿರಾಗಿರುವ ಸಾರ್ವಕಾಲಿಕ ತತ್ವವನ್ನು ತನ್ನಲ್ಲಿ ಒಳಗೊಂಡಿದೆ.

**ಗೋಲ್ :** ಬೇಂದ್ರೆಯವರು ಒಟ್ಟು ೧೪ ನಾಟಕಗಳನ್ನು ರಚಿಸಿದ್ದಾರೆ. ಅವರು ರಚಿಸಿದ ಪ್ರಥಮನಾಟಕ 'ಗೋಲ್'. ಅದು ೧೯೨೦ರಲ್ಲಿ ರಚನೆಯಾಯಿತು. ಅದು ಏಕಾಂಕ ಪ್ರಹಸನ. ಅದು ಬೇಂದ್ರೆಯವರು ಗೆಳೆತನದ ಸಾಧನೆಯ ಗುಂಗು ಹಿಡಿಸಿಕೊಂಡು ಕರ್ನಾಟಕ ಕಾಲೇಜಿನ ಸ್ನೇಹ ಸಮ್ಮೇಳನಕ್ಕಾಗಿ

ಬರೆದ ಆದರ್ಶಮಯ ನಾಟಕ. ಅದರ ಪ್ರಥಮ ಪ್ರಯೋಗ ಮತ್ತು ಅದರಲ್ಲಿ ಪಾತ್ರವಹಿಸಿದವರನ್ನು ಕುರಿತು ವಾಮನಬೇಂದ್ರೆಯವರು 'ಗೋಲ್'ನ 'ಸಂಪಾದಕರ ನುಡಿ'ಯಲ್ಲಿ "ಈ ನಾಟಕದೊಳಗಿನ ರಂಗನಾಯಕ ಎಂದರೆ ದಿ.ರಂ.ಶ್ರೀ. ಮುಗಳಿ ಮತ್ತು ತಿಮ್ಮ ದಿ.ಜಿ.ಬಿ. ಜೋಶಿ ಎಂಬುದಾಗಿ ಬೇಂದ್ರೆಯವರು ಹೇಳಿದ ನೆನಪು ನನಗಿದೆ. ಎಲ್ಲ ಗೆಳೆಯರು ಕೂಡಿ ೧೯೨೧ರಲ್ಲಿ ಈ ನಾಟಕದ ಪ್ರಯೋಗ ಮಾಡಿದರು"[೧೬] ಎಂದು ತಿಳಿಸಿದ್ದಾರೆ.

'ಗೋಲ್' ನಾಟಕದಲ್ಲಿ ವಿದ್ಯಾವಿನೋದಸಮಾಜದ ಗೆಳೆಯರು ಸೇರಿ ಕಾಲೇಜು ವಿದ್ಯಾರ್ಥಿಗಳಾದ ತಾವು ಜೀವನದಲ್ಲಿ 'ಗೋಲ್' ಅಂದರೆ ಗುರಿ ಹೊಂದಿ ಆದರ್ಶ ಸಮಾಜ ಕಟ್ಟುವ ಗೋಲ್‌ನತ್ತ ಸಾಗುತ್ತಾರೆ. ಕಾಲೇಜು ಕಲಿತವರು ತಮ್ಮ ದೈನಂದಿನ ಮಾತುಕತೆಯಲ್ಲಿ ಇಂಗ್ಲಿಷ್ ಬಳಸುವ ಸಹಜರೀತಿ ಆ ನಾಟಕದಲ್ಲಿದ್ದು, ಆಗಿನ ಕಲಿತಯುವಕರ ಸಹಜಚಿತ್ರವನ್ನು ಆ ನಾಟಕ ಪರಿಚಯಿಸುತ್ತದೆ. ಬೇಂದ್ರೆಯವರು ಪುಟ್‌ಬಾಲ್ ಆಟಗಾರರಾಗಿದ್ದು, ಆಟದ ಗೋಲ್‌ನಂತೆ ಜೀವನದಲ್ಲಿಯೂ ಗೋಲ್ ಇರಬೇಕು, ಅದನ್ನು ಸಾಧಿಸಬೇಕು ಎಂಬ ಮನೋಧರ್ಮದಿಂದ ನಾಟಕ ರಚಿಸಿದಂತಿದೆ.

ಸ್ನೇಹಿತರಾದ ರಂಗನಾಯಕ, ಕುಲಕರ್ಣಿ,ಪಾಟೀಲರು ಲೈಫ್‌ನ ಗೋಲ್ ಬಗ್ಗೆ ಚರ್ಚಿಸುತ್ತಿರುವಾಗ, ಸ್ನೇಹಿತ ಕಾಜೀ ಸಾಹೇಬರು ಬಂದು ಜೊತೆಗೆ ಸೇರುತ್ತಾರೆ. ಆಗಿನ ಒಂದು ಸಂಭಾಷಣೆ ಓದಿಸವಿಯಿರಿ :

**ಗೋಖಲೆ :** Here comes the guardian Angel of the Goal ! ಏನು ಕಾಜೀ !

**ಕುಲಕರ್ಣಿ :** Goal Keeper ಆಟದೊಳಗ ಇವರು ಪುಟ್‌ಬಾಲ್ ಆಗತಾರ, ಇವರಿಗೆ ಕೇಳ್ರಿ ಗೋಲಿನ ಬಗ್ಗೆ !

**ಕಾಜೀ :** I am not the right person to be consulted in this matter; for, my duty is not to allow anybody to score goal. (ಎಲ್ಲರೂ ನಗುವರು)

**ಗೋಖಲೆ**<br>**ಪಾಟೀಲ** : Splendid ! Beautiful.

ಇಂತಹ ಯುವಕರು ವಿದ್ಯಾವಿನೋದ ಸಮಾಜದ ಪ್ರೆಸಿಡೆಂಟ್ ಆಗಿ ಪಾಟೀಲರನ್ನು, ಸೆಕ್ರೆಟರಿಯಾಗಿ ಗೋಖಲೆಯವರನ್ನು ಆಯ್ಕೆಮಾಡಿದ ನಂತರ ಇಂಗ್ಲಿಷ್‌ಪದ ಬಳಸಿ ಮಾತನಾಡುವಾಗ, ಕುಲಕರ್ಣಿಯು ಇನ್ನು ಕನ್ನಡದಲ್ಲಿ ಮಾತನಾಡಿ ಎಂದು ಇಂಗ್ಲಿಷ್ನಲ್ಲಿ ಹೇಳುತ್ತಾನೆ.

**ಕುಲಕರ್ಣಿ :** In Kannada Please.

**ಪಾಟೀಲ :** ಭಲೇ

ನಂತರ ಪಾಟೀಲ, ಗೋಖಲೆ, ನಾಯಕ ಮತ್ತು ಕುಲಕರ್ಣಿಯವರ ಸ್ಪೀಚ್ ಅಚ್ಚಗನ್ನಡದಲ್ಲಿ ನಡೆಯುತ್ತದೆ. ಅಂದರೆ ಕನ್ನಡ ಬಳಕೆಯ ರೀತಿ, ಕನ್ನಡದ ಪರಿಸ್ಥಿತಿ ಅಂದಿನಿಂದ ಇಂದಿನವರೆಗೂ ಏನೂ ಬದಲಾಗಿಲ್ಲ. ಕನ್ನಡ ಬಳಕೆಯ ಒತ್ತಾಯ ಇಂಗ್ಲಿಷ್‌ನಲ್ಲಿ ಬರುವ ಜಾಡು ಹಾಗೆಯೇ ಇದೆ ಎಂಬ ಅಂಶವೂ ಈ ಸಂಭಾಷಣೆಯಿಂದ ಗೊತ್ತಾಗುತ್ತದೆ.

**ಸಾಯೋಆಟ :** ಬೇಂದ್ರೆಯವರು ಅಸಂಗತ ತತ್ವಹೊಂದಿದ ಸಾಯೋಆಟ, ಜಾತ್ರೆ ಎಂಬ ಎರಡು ನಾಟಕಗಳನ್ನು ರಚಿಸಿದ್ದಾರೆ. ಸಾಯೋಆಟ ೧೯೨೫ರಲ್ಲಿ ರಚಿತವಾಗಿ ಹಲವಾರು ಪ್ರಯೋಗಗಳನ್ನು ಕಂಡು ಜನರನ್ನು ನಕ್ಕು ನಗಿಸಿ ಇಂದಿಗೂ ಪ್ರಸ್ತುತವೆನಿಸಿ ಸಾರ್ವಕಾಲಿಕ ಸತ್ಯವನ್ನು ತನ್ನಲ್ಲಿ ಒಳಗೊಂಡ ಅಂಶಗಳಿಂದ ಇಂದೂ ಜನಪ್ರಿಯವಾಗಿದೆ. 'ಸಾಯೋಆಟ' ನಾಟಕವು ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗೆ ಅನುವಾದವಾಗಿರುವುದನ್ನು 'ಸಂಪಾದಕರ ನುಡಿ' ಯಲ್ಲಿ ವಾಮನಬೇಂದ್ರೆಯವರು ತಿಳಿಸಿದ್ದಾರೆ. "ಮೈಸೂರಿನ ಮಹಾರಾಜಾ ಸಂಸ್ಕೃತ ಕಾಲೇಜಿನ ವಿದ್ಯಾರ್ಥಿಗಳು ಈ ನಾಟಕದ ಸಂಸ್ಕೃತ ಅನುವಾದವನ್ನು ಮಾಡಿ ಅಭಿನಯಿಸಿದರು. ವಿಶ್ವಕನ್ನಡ ಸಾಹಿತ್ಯ ಸಮ್ಮೇಳನದ ಕಾಲಕ್ಕೆ ಸಾಯೋಆಟದ ಇಂಗ್ಲೀಷ್ ಅನುವಾದವನ್ನು ಪ್ರೊ. ಗೋಪಾಲ ಕೃಷ್ಣ ಅಡಿಗರು ಮಾಡಿದರು."[೧೭] 'ಸಾಯೋಆಟ' ನಾಟಕದಲ್ಲಿ ಸಮಾಜದಲ್ಲಿನ ವಿಪರ್ಯಾಸ ವನ್ನು ಹುಚ್ಚುದೊರೆ ಮತ್ತು ಹುಚ್ಚುದಿವಾನನ ಹುಚ್ಚಾಟವಾಗಿ ಚಿತ್ರಿಸಿದ್ದಾರೆ. ಆ ನಾಟಕದಲ್ಲಿಯ ವಿವಿಧ ವ್ಯಕ್ತಿಗಳು, ವಿವಿಧ ಪ್ರವೃತ್ತಿಯವರು, ವಿವಿಧ ಬದುಕಿನವರು ಅವರ ಸಹಜ ಆಡುನುಡಿ, ಬಾಗು ಬಳುಕಿನಿಂದ, ಹಾಸ್ಯ

ವಾತಾವರಣದ ಸೃಷ್ಟಿಯಿಂದ ಕನ್ನಡ ನಾಟ್ಯ ಪ್ರಪಂಚಕ್ಕೆ ಅಂದು ಹೊಸತಾಗಿ ಬಂದವರು ಇಂದೂ ಹೊಸತಾಗಿ ನಿಂತಿರುವುದು-ಬೇಂದ್ರೆಯವರ ನಾಟಕ ಶಕ್ತಿಯ ಸಾರ್ವಕಾಲಿಕತೆಗೆ ದ್ಯೋತಕವಾಗಿದೆ. ಮನೆಗೆ ಕನ್ನಹಾಕಲು ಹೋದ ಕಳ್ಳ ಮನೆಗೋಡೆ ಕುಸಿದುಬಿದ್ದು ಸಾಯಲು; ನ್ಯಾಯ ಕೇಳುವ ಕಳ್ಳನ ಹೆಂಡತಿ ಕಳ್ಳಿಯ, ಗೃಹಸ್ಥನ, ಕೊತವಾಲನ ಸಂಭಾಷಣೆ ಓದಿ :

**ಕಳ್ಳಿ :** ಗಂಡನಂತೂ ಕೈಬಿಟ್ಟು ಹೋದನು. ಇನ್ನು ನನಗೆ ನ್ಯಾಯಬೇಕು, ನ್ಯಾಯ.

**ಗೃಹಸ್ಥ :** ಹೌದೆಲೆಕಳ್ಳಿ, ಇದೆಂತಹ ನ್ಯಾಯ; ಅನ್ಯಾಯ !

**ಕೊತವಾಲ :** ಯಾವ ಬಗೆಯ ನ್ಯಾಯ?

**ಕಳ್ಳಿ :** ಈ ಮನೆಯವರಾದರೂ ನನ್ನನ್ನು ಮದುವೆ ಮಾಡಿಕೊಳ್ಳಬೇಕು. ಇಲ್ಲವೇ 'ಪ್ರಾಣಕ್ಕೆ ಪ್ರಾಣ'ವೆನ್ನುವ ಕಟ್ಟಳೆಯಂತೆ ಈ ಮನೆಯ ಯಜಮಾನನ ಪ್ರಾಣ ತೆಗೆದುಕೊಳ್ಳಬೇಕು.

ಅನಂತರ ದೊರೆ ಮತ್ತು ದಿವಾಣ ಪ್ರವೇಶಿಸಿ ಗೋಡೆ ಕಟ್ಟಿದ ಉಪ್ಪಾರನನ್ನು ಹುಡುಕಿಸಿ ಅವನು ಸಿಗದಿರಲು ಸಿಕ್ಕ ಬಡ ಕೂಲಿಯನ್ನು - ಉಪ್ಪಾರನ ಸಹಾಯಕ ಖೂನಿಯವನಿದ್ದಂತೆ ಎಂದು ತೀರ್ಮಾನಿಸುವರು. ದೊರೆಯು 'ದಿವಾಣರೆ ಕೊಂದುಬಿಡಿರಿ ಆ ಎಡಬನನ್ನು' ಎಂದು ಆಜ್ಞೆ ಮಾಡುವನು. ಕೂಲಿ ದಿವಾಣನ ಕೈಯನ್ನು ಹಣದಿಂದ ಬೆಚ್ಚಗೆಮಾಡಲು ಆಗ ದಿವಾಣ ನುಡಿವ ಮಾತು ಸ್ವಾರಸ್ಯವಾಗಿದೆ, ಓದಿ :

**ದಿವಾಣ :** ದೊರೆಗಳೇ ! ಇವನ ಕೈ ಬೆಚ್ಚಗಿದೆ. ಇವನು ತಪ್ಪು ಮಾಡಿದ್ದರೆ ಇವನು ಹೆದರುತ್ತಿರಲಿಲ್ಲವೇ ? ಮತ್ತು ಹೆದರಿದ್ದರೆ, ಇವನ ಕೈ ಹೇಗೆ ಬೆಚ್ಚಗಿರುತ್ತಿತ್ತು?

**ದೊರೆ :** ಇವನ ಕೈ ಬೆಚ್ಚಗಿದೆಯೋ? ಹಾಗಾದರೆ ತಣ್ಣಗಾಯಿತು. ಇವನು ಅಪರಾಧಿಯಲ್ಲವೆಂದಂತಾಯಿತು.

ಎಂದು ತೀರ್ಮಾನಕ್ಕೆ ಬಂದು ನೋಡುತ್ತ ನಿಂತಿದ್ದ ಪೈಕಿ ಒಬ್ಬ ಸೂಳೆಗೆ ಖೂನಿ ಆರೋಪ ಹೊರಿಸಿ ತನ್ನ ನಾಡಿನ "ಪ್ರಾಣಕ್ಕೆ ಪ್ರಾಣ' ಎಂಬ ನ್ಯಾಯದಂತೆ ಮರಣದಂಡನೆ ವಿಧಿಸಿದಾಗ ಸೂಳೆ ಮತ್ತು ದೊರೆಯು ಸಂಭಾಷಣೆ ಓದಿ :

**ಸೂಳೆ:**...... ಒಬ್ಬ ಗಂಡಸಿನ ಸಲುವಾಗಿ ಪ್ರಾಣಕೊಡುವ ಹೊಣೆ ಹೆಂಗಸಿಗೇಕೆ? ಈ ನ್ಯಾಯ ವಿಚಾರಣೆಯಾಗಲಿ ಮೊದಲು.

**ದೊರೆ :** ಒಳ್ಳೇ ಪೇಚು ಬಂತು.

**ಸೂಳೆ :** ಪೇಚೇನು ? ನಿಮಗೆ ಗಂಡಿಸಿಗಾಗಿ ಸಾಯಲು ಗಂಡಸೊಬ್ಬಬೇಕು. ಅಗೋ, ಅಲ್ಲಿ ಕೊತವಾಲರು ಆ ಸನ್ಯಾಸಿಯನ್ನು ತಂದಿದ್ದಾರೆ. ಕೊನೆಯ ಆಶ್ರಮಕ್ಕೆ ಬಂದ ಅವರೇ ಮರಣಕ್ಕೆ ಯೋಗ್ಯರು.

ಸಾಯಲು ಸಿದ್ಧವಾಗಿ ಬಂದ ಸನ್ಯಾಸಿಯ ಪ್ರವೇಶದಿಂದ ತಿಳಿದ ವಿಷಯ– ಮೊದಲು ಸಾಯುವವರು ಸುತ್ತಲಿನ ರಾಜ್ಯದ ರಾಜಪದವಿ ಪಡೆಯುವರು ಅನಂತರ ಸಾಯುವವರಿಗೆ ಮಂತ್ರಿ ಪದವಿಯೆಂದು ರುದ್ರನ ವರವಿದೆ– ಎಂಬ ಮಾತು. ಆಗ ರಾಜ ಮತ್ತು ದಿವಾಣ ಸನ್ಯಾಸಿಯ ಸಾಯುವ ಒಳಸಂಚು ಆಗಗೊಡದಂತೆ ತಾವೇ ಪಾಶ ಹಾಕಿಕೊಂಡು ಸಾಯುವರು. ಈ ನಾಟಕ ಸಮಾಜದಲ್ಲಿನ ಸಾಯೋಆಟಕ್ಕೆ ಕನ್ನಡಿ ಹಿಡಿದಂತಿದೆ, ಆದರೆ ಇದು ದುರಂತ ನಾಟಕವಲ್ಲ, ಹುಚ್ಚಾಟ ಕಂಡು ನಗುವ ಅಸಂಗತ ನಾಟಕವಾಗಿದೆ.

**ಜಾತ್ರೆ :** 'ಜಾತ್ರೆ' ನಾಟಕವನ್ನು ಬೇಂದ್ರೆಯವರು ೧೯೩೪ರಲ್ಲಿ ರಚಿಸಿದರು. ಅಂದಿನಿಂದ ಇಂದಿನವರೆಗೂ ಈ ನಾಟಕ ತುಂಬಾ ಜನಪ್ರಿಯವಾಗಿ ಹಲವು ಪ್ರಯೋಗಗಳನ್ನು ಕಂಡಿದೆ. ಇದರ ಜನಪ್ರಿಯತೆಯನ್ನು ಕಂಡು ಬೇಂದ್ರೆ ಯವರೆ ಈ ನಾಟಕವನ್ನು ೧೯೩೭ರಲ್ಲಿ ಮರಾಠಿಗೆ ಅನುವಾದ ಮಾಡಿದ್ದಾರೆ. ಇದು ಹಿಂದಿ ಭಾಷೆಗೂ ಅನುವಾದವಾಗಿದೆ. ಅಂಟುರೋಗ ಪ್ಲೇಗಿನ ಹಿನ್ನೆಲೆಯ ಹುಚ್ಚಾಟ ಈ ನಾಟಕದ ವಸ್ತುವಾಗಿದೆ. ಹುಚ್ಚಾಪುರದಲ್ಲಿ ಪ್ಲೇಗ್ ಹರಡುತ್ತಿದ್ದರೂ ದೊರೆಯು ಆರ್ಥಿಕಲಾಭದ ದೃಷ್ಟಿಯಿಂದ ಜಾತ್ರೆ ನಡೆಸುವ ಛಲದಿಂದ

ಡಂಗುರ ಸಾರಿಸಿ–'ಊರಾಗ ಪ್ಲೇಗಿಲ್ಲ. ಯಾರೂ ಊರು ಬಿಡಕಾಗದೂ! ಜಾತ್ರೆ ಆಗೇ ಆಕ್ಕೈತಪೋ ಆಗೆ ಆಕ್ಕೈತಿ.' ಎಂದು ಊರಿನ ಜನಕ್ಕೆ ಹೇಳಿ, ಆಳುವ ವರ್ಗದ ದರ್ಪ ಹಾಗೂ ಶೋಷಣೆಯ ಪ್ರತೀಕವಾಗುತ್ತಾನೆ.

ದೊರೆಯ ಮಾತಿಗೆ ತಕ್ಕಂತೆ ತಲೆದೂಗುವ, ನಿಜಹೇಳಲು ಹೆದರುವ ಅಧಿಕಾರಶಾಹಿ ಪ್ರತೀಕವಾದ ಕಾರಭಾರಿ ಮತ್ತು ಡಾಕ್ಟರು ವ್ಯವಸ್ಥೆಯನ್ನು ಪ್ರತಿಬಿಂಬಿಸುತ್ತಾರೆ. ಕೊನೆಗೆ ದೊರೆಗೆ ಪ್ಲೇಗು ಸೋಕುತ್ತದೆ. ಆ ಸಂದರ್ಭದ ದೊರೆ ಮತ್ತು ಡಾಕ್ಟರ ಸಂಭಾಷಣೆ ಓದಿ :

**ದೊರೆ :** ಮಂಚದ ಮೇಲೆ ಬಿದ್ದು ಕೊಳ್ಳಲಾ ಎನಿಸುತ್ತಿದೆ.

**ಡಾಕ್ಟರು :** ತಾವು ಬಿದ್ದು ಕೊಂಡರೆ ಜಾತ್ರೆಯೂ ಬಿದ್ದುಕೊಂಡು ಬಿಡುವುದು ದೇವರು.

**ದೊರೆ :** ತಲೆ ತಿರುಗಹತ್ತಿದೆ.

**ಡಾಕ್ಟರು :** ತಮ್ಮ ವಿಚಾರಗಳ ಪ್ರಭಾವವದು.

**ದೊರೆ :** ಕಣ್ಣು ಉರಿಯಹತ್ತಿವೆ.

**ಡಾಕ್ಟರು :** ತಮ್ಮ ದೃಷ್ಟಿಯು ಅಷ್ಟು ಪ್ರಖರ.

**ದೊರೆ :** ಬಾಯಿ ಆರುತ್ತಿದೆ.

**ಡಾಕ್ಟರು :** ಏನೂ ಅಡ್ಡಿಯಿಲ್ಲ ದೇವರು.

**ದೊರೆ :** ಡಾಕ್ಟರೇ, ನಿಮ್ಮ ಶಾಂತತೆ ನನಗೆ ಸಹಿಸಲಾಗುವುದಿಲ್ಲ. ನನಗೇನೋ ಆಗಿದೆ. ಪರೀಕ್ಷಿಸಿ ನೋಡಿರಿ.

**ಡಾಕ್ಟರು :** ಪರೀಕ್ಷಿಸಿ ಏನು ನೋಡುವುದು ? ಮೇಲೆಯೇ ಕಾಣುತ್ತಿದೆ. ಸತ್ತವರ ಸುದ್ದಿಗಳನ್ನು ಮುಂಜಾವಿನಿಂದ ಕೇಳಿ ಕೇಳಿ ಹಾಗೆ ಭ್ರಮವಾಗಿರಬೇಕು.

**ದೊರೆ :** ಹಾಗೆ ಎಂದರೆ ಹೇಗೆ? ಪ್ಲೇಗು ಎಂದೊ?

**ಡಾಕ್ಟರು :** ಆ ಮಾತು ನಾನಾಡಲಾರೆ. ದೊರೆಗಳು ಹೇಳಬಹುದು.

**ದೊರೆ :** (ಹಾಸಿಗೆಯ ಮೇಲುರುಳುತ್ತ) ಡಾಕ್ಟರೇ, ಪ್ಲೇಗೆಂಬ ಮಾತಿಗೆ ಎಷ್ಟು ಹೆದರುತ್ತೀರಿ?

**ಡಾಕ್ಟರು** : ನನಗೆ ಪ್ಲೇಗಿನ ಭೀತಿಯಲ್ಲ, ತಮ್ಮದು ದೇವರು.

**ದೊರೆ** : ಹೆದರದೆ ಹೇಳಿರಿ; ನನಗೇನಾಗಿರಬೇಕು?

**ಡಾಕ್ಟರು** : ಪ್ಲೇಗು!

ವ್ಯವಸ್ಥೆಯ ವಿಪರ್ಯಾಸದ ದುರಂತ ಇಂಚುಇಂಚಾಗಿ ವಾತಾವರಣವನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತಿದ್ದರೂ, ಅಹಂಕಾರದ, ಆರ್ಥಿಕಲಾಭದ ದೊರೆ ಮತ್ತು ಅವನ ಅಧಿಕಾರಶಾಹಿ ಕಾರಭಾರಿ ಹಾಗೂ ಡಾಕ್ಟರಿಂದ ಇದೊಂದು ಹುಚ್ಚಾಟವಾಗಿ ಪ್ರೇಕ್ಷಕರನ್ನು ನಗೆಯಲ್ಲಿಮುಳುಗಿಸಿಬಿಡುತ್ತದೆ. ಪ್ರೇಕ್ಷಕನು ನಗುನಗುತ್ತ ವ್ಯವಸ್ಥೆಯಲ್ಲಿ ತನಗಿರಬೇಕಾದ ಎಚ್ಚರವನ್ನು ಪಡೆಯುವುದು ಈ ನಾಟಕದ ವೈಶಿಷ್ಟ್ಯವಾಗಿದೆ.*

'ಹೆಣ್ಣಿಗೆ ಹೆಣ್ಣೇ ವೈರಿ' ಎಂದು ಚಿತ್ರಿಸಿರುವ ಸ್ತ್ರೀಪ್ರಧಾನ ನಾಟಕ 'ನಗೆಯ ಹೊಗೆ'. ಸ್ತ್ರೀಯರ ಹರಟೆ, ಮುಗ್ಧೆ ಭಾಗೀರಥಿಯ ಆತ್ಮಹತ್ಯೆಗೆ ಕಾರಣವಾಗುತ್ತದೆ. ಶೋಭನಾ ಮತ್ತು ಹನುಮಣ್ಣರ ಶೋಭನದ ಸುತ್ತ ಹೆಣೆದಿರುವ 'ಶೋಭನಾ' ನಾಟಕ, ನಾಟಕೀಯ ವಾತಾವರಣವನ್ನು ತನ್ನಲ್ಲಿ ಹೊಂದಿ ವಿನೋದ ನಾಟಕವಾಗಿದೆ. ಹೀಗೆ ಬೇಂದ್ರೆಯವರ ನಾಟಕಗಳಲ್ಲಿ ಸಾಂಸಾರಿಕ ನೆಲೆಯ, ಸಾಮಾಜಿಕ ನೆಲೆಯ ನಾಟಕಗಳಿವೆ. ಅವರು ಕನ್ನಡದಲ್ಲಿ ಅಸಂಗತ ಅಂಶಗಳನ್ನು ಹೊಂದಿದ ನಾಟಕಗಳನ್ನು ರಚಿಸಿದ ಮೊದಲ ನಾಟಕಕಾರರಾಗಿದ್ದಾರೆ. ನಾಟಕಗಳ ಜೊತೆಗೆ ಅವರು ೧೧ ಬಾನುಲಿ ರೂಪಕಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಪ್ರಕಟಿತರೂಪಕಗಳು : ಯಕ್ಷಯಕ್ಷಿ, ಉತ್ತರಾಯಣ. ಅಪ್ರಕಟಿತ ರೂಪಕಗಳು : ಧನ್ಯವೃಂದಾವನ, ನಾರೀನಾರಾಯಣಿ, ಸಂತಸಮಾಗಮ, ರಂಗವಿಠ್ಠಲ, ರಾಮನವಮಿ, ದಾಸ ಕನಕದಾಸ, ದಯವೇ ಧರ್ಮದ ಮೂಲ, ಇದು ಗೋಕುಲಾಷ್ಟಮಿ ಮತ್ತು ಬೆನಕನಪೂಜೆ.

---

* ಈ ಲೇಖಕನು 'ಜಾತ್ರೆ' ನಾಟಕವನ್ನು ನಿರ್ದೇಶಿಸಿ ಧ್ವನಾಲೋಕದಲ್ಲಿ ಪ್ರದರ್ಶಿಸಿ ಜನರು ನಕ್ಕು ನಲಿವಂತೆ ಮಾಡಿದ್ದಾನೆ.

# ಸಾಹಿತ್ಯಸಿದ್ಧಿ :
# ಸಾಹಿತ್ಯವಿಮರ್ಶೆ ಮತ್ತು ಸಂಶೋಧನೆ

ಬೇಂದ್ರೆಯವರು ಕವಿಯಾಗಿ ಭಾವಜೀವಿಯಾದವರು. ಅವರ ಆ ಸಹೃದಯ ಭಾವನಾಲಹರಿಯ ಶೈಲಿಯಲ್ಲಿ ಹೆಚ್ಚು ಭಾವನಾತ್ಮಕವಾಗಿ ಅವರ ವಿಮರ್ಶೆ ಹಾಗೂ ಸಂಶೋಧನಾ ಬರಹಗಳಿವೆ. ವಿಚಾರದ ಸ್ಪಷ್ಟತೆಯ ಗದ್ಯ ಬರಹದಲ್ಲಿ ಭಾವನೆಯು ಮೇಲುಗೈಯಾಗಿ, ಚಿಂತನೆಯ ಸಾಧ್ಯತೆಗಾಗಿ ಅವರ ಕಾವ್ಯ ಅಭ್ಯಸಿಸಬೇಕು ಎಂಬ ಭಾವನೆ ಉಂಟಾಗುತ್ತದೆ. ಸಾಹಿತ್ಯ ಸಂಸ್ಕೃತಿಯ ವಿಮರ್ಶಕರಾಗಿ ಬೇಂದ್ರೆಯವರು 'ಸಾಹಿತ್ಯದ ವಿರಾಟ್ ಸ್ವರೂಪ' ಎಂಬ ಹೆಬ್ಬೊತ್ತಿಗೆಯನ್ನು ಕನ್ನಡಿಗರಿಗೆ ನೀಡಿದ್ದಾರೆ. ೧೦೬೬ ಪುಟಗಳಿರುವ ಈ ಕೃತಿ ಅವರ ಆಲೋಚನಾಲಹರಿ ಗದ್ಯರೂಪವಾಗಿ ಹರಿದ ಹಲವು ಮುಖ ವನ್ನು ಪರಿಚಯ ಮಾಡಿಕೊಡುವ ಮಹತ್ತ್ವದ ಕೃತಿಯಾಗಿದೆ.

**ನಾಗಚಂದ್ರನಕಾಲ** : 'ಸಾಹಿತ್ಯದ ವಿರಾಟ್ ಸ್ವರೂಪ' ಕೃತಿಯಲ್ಲಿನ 'ನಾಗಚಂದ್ರನ ಮಲ್ಲಿನಾಥಪುರಾಣ' ಕವಿ-ಕೃತಿ ವಿಮರ್ಶಾಲೇಖನದಲ್ಲಿ "...... ಮಲ್ಲಿನಾಥಪುರಾಣವು ಹತ್ತೆಂಟು ಎಸಳಿನ ಹೂವು ಅರಳಿದಂತೆ; ರಾಮಚಂದ್ರ ಚರಿತ ಪುರಾಣವು ಸಾವಿರಕಂಬದ ಬಸದಿಯನ್ನು ಕಟ್ಟಿದಂತೆ."[೧೮] ಎಂಬ ವಿಮರ್ಶಾ ನುಡಿ ನುಡಿದಿದ್ದಾರೆ. ನಾಗಚಂದ್ರನ ಕಾಲವನ್ನು ನಿರ್ಣಯಿಸಲು ಅವನ ಕಾವ್ಯದಲ್ಲಿ ಪ್ರಯೋಗಿಸಲ್ಪಟ್ಟಿರುವ ಶ್ಲೇಷೆಯನ್ನು ಸಂಶೋಧನಾ ದೃಷ್ಟಿಯಿಂದ ನೋಡಿರುವುದು ಅವರ ಆಳವಾದ ಅಧ್ಯಯನಕ್ಕೆ ಸಾಕ್ಷಿಯಾಗಿದೆ. "ಇದರೊಳಗಿನ 'ಪ್ರಭು' ಹಾಗೂ 'ಮಾಯೆ' ಶಬ್ದಗಳು ಮತ್ಸ್ಯೇಂದ್ರ ಗೋರಖಪಂಥಸಂಸರ್ಗದಲ್ಲಿ ಬೆಳೆದು ಮುಂದೆ ಬಸವನೊಡನೆ ಪ್ರಸಂಗಮಾಡಿ

ಕನ್ಯೆ(ಮಹಾದೇವಿಯಕ್ಕ)ಯೊಡನೆ ಶಿವಾನುಭವಗೋಷ್ಠಿ ಬೆಳೆಸಿ, ಪವಾಡಗಳಿಂದಲೂ ಜನಪ್ರಿಯನಾಗುತ್ತಲಿದ್ದು ಮಾಯೆಯನ್ನು ಗೆದ್ದ ಪ್ರಭುವೆಂದು ಪ್ರಸಿದ್ಧಿಗೆ ಬರುತ್ತಿದ್ದ ಅಲ್ಲಮನನ್ನು ಕುರಿತು ಇರಬೇಕೆಂದು ಎತ್ತಿ ಒತ್ತಿ ಹೇಳುವಂತೆ ನನಗಂತೂ ತೋರುವದು."[೧೯] "ವೃಷಭ–ಕನ್ಯೆ ಶಬ್ದಗಳು ಬಸವನನ್ನೂ ಮಹಾದೇವಿಯಕ್ಕನನ್ನೂ ಸೂಚಿಸುವವು... ಅವನ ಕಾಲಪ್ರಭುವಿನ ಕಾಲ ಪ್ರಭುವು ಬಸವನಿಗೆ ವಯಸ್ಸಿನಲ್ಲಿ ಹಿರಿಯ"[೨೦] ಎಂಬ ಸ್ಪಷ್ಟ ನಿಲುವಿಗೆ ಬಂದಿದ್ದಾರೆ.

**ಸಮಂತಭದ್ರನೇ 'ಶ್ರೀವಿಜಯ'ನಿರಬಹುದೇ** ? ಈ ಸಂಶೋಧನಾ ಲೇಖನವನ್ನು 'ಒಂದೂಹೆ' ಎಂದು ಸಂಶೋಧನಾ ಶಿಸ್ತಿಗೆ ಒಳಪಟ್ಟರೀತಿಯಲ್ಲಿ ಬರೆದಿದ್ದಾರೆ. "ಪಂಪನು ತನ್ನ ಕಾವ್ಯದಾದಿಯಲ್ಲಿ ಸಮಂತಭದ್ರ, ಕವಿ ಪರಮೇಷ್ಠಿ, ಪೂಜ್ಯಪಾದರಿಗೆ ವಂದನೆಮಾಡಿದ್ದಾನೆ"[೨೧] "ನೃಪತುಂಗನು ಪೂರ್ವದ ಕವಿಗಳೆಂದು ಹೇಳುವ 'ಪರಮಶ್ರೀವಿಜಯ, ಕವೀಶ್ವರ, ಪಂಡಿತ' ಎಂದು ಹೇಳುವ ಐದು ಕವಿಗಳಲ್ಲಿ ಮೊದಲು ಮೂವರಾದವರೇ ಸಮಂತಭದ್ರ, ಕವಿ ಪರಮೇಷ್ಠಿ, ಪೂಜ್ಯಪಾದರು ಇರಲಾರರೇ? ಎಂಬ ವಿಚಾರವುತಲೆದೋರಿತು. .....ಅಂತೂ ಸಮಂತಭದ್ರ, ಕವಿಪರಮೇಷ್ಠಿ (ಇದೂ ಬಿರುದೇ ಇರಬೇಕು), ಪೂಜ್ಯಪಾದರು ತಮ್ಮ ಬಿರುದುಗಳಾದ 'ಶ್ರೀವಿಜಯ,' 'ಕವೀಶ್ವರ' 'ಪಂಡಿತ' ಎಂಬ ಉಪನಾಮಗಳಿಂದ ನೃಪತುಂಗನಿಂದ ಉಲ್ಲೇಖಿತರಾಗಿದ್ದಾರೆ ಎಂದು ತೋರುತ್ತದೆ."[೨೨] "ಅನೇಕ ಕವಿಗಳಿಗೆ ಕಾವ್ಯನಾಮಗಳು ಅಥವಾ ಮುದ್ರಿಕೆಗಳಿದ್ದವು. ಮಾಘನಮುದ್ರಿಕೆ 'ಶ್ರೀ'; ಭಾರವಿಯದು 'ಲಕ್ಷ್ಮೀ', ಪ್ರವರ ಸೇನನದು 'ಅನುರಾಗ'; ಪಂಚಶಿಖನದು 'ಆನಂದ'–ಹೀಗೆ ಈ ಪದಗಳನ್ನು ಆ ಕವಿಗಳು ತಮ್ಮ ಕಾವ್ಯದ ಹಾಗೂ ಸರ್ಗಗಳ ಆದಿ ಅಂತ್ಯ ಪದ್ಯಗಳಲ್ಲಿ ಸೇರಿಸುತ್ತಿದ್ದರು. ಸಮಂತಭದ್ರನಿಗೆ 'ಶ್ರೀವಿಜಯ,' 'ವಿಜಯ', 'ಜಯ' ಪದವನ್ನು ಸೇರಿಸುವ ಪ್ರೀತಿಯಿತ್ತಾದ್ದರಿಂದ ಕವಿಗಳಲ್ಲಿ ಅವನು ಶ್ರೀವಿಜಯನೆಂದು ಖ್ಯಾತನಾಗಿರುವುದುಚಿತವಾಗಿದೆ"[೨೩] ಎಂಬ ಊಹೆಯನ್ನು ಆಧಾರ ಸಹಿತ ಬೆಳೆಸುತ್ತ 'ಬೃಹತ್ ಸ್ವಯಂಭೂಸ್ತೋತ್ರ', 'ಆಪ್ತಮಿಮಾಂಸಾ', 'ಜಿನಶತಕ', 'ಕವಿರಾಜಮಾರ್ಗ' 'ಕವಿಚರಿತೆ'ಯಿಂದ

ಪದ್ಯಗಳನ್ನು ಆಯ್ದು ವಾದ ಮಂಡಿಸುತ್ತಾ ಸಾಗುವುದು ಅವರ ಓದಿನ ವಿಸ್ತಾರವನ್ನು, ಸಂಶೋಧನಾ ದೃಷ್ಟಿಯನ್ನು ಪರಿಚಯಿಸುತ್ತದೆ. ಕವಿಯಾಗಿ ನಂಬಿಕೆಯ ಬೆನ್ನು ಹತ್ತುವ ಬೇಂದ್ರೆಯವರು ಸಂಶಯಪಡುವ ಸಂಶೋಧಕನಾಗದೆ ಕೊನೆಗೆ "ಈ ಊಹೆಯು ಸಮಂಜಸವೂ ತಥ್ಯವುಳ್ಳದ್ದೂ ಆಗಿ ಕಂಡರೆ ಹೊಸ ಸಂಶೋಧನೆಗೆ ಹಾದಿಯಾಗಬಹುದು"[೨೪] ಎಂದು 'ಒಂದೂಹೆ'ಯನ್ನು ಮುಕ್ತಾಯಗೊಳಿಸಿದ್ದಾರೆ.

**ಪಂಪನ ಛಾಯೋಪಜೀವಿ :** 'ರನ್ನಕವಿ ಪ್ರಶಸ್ತಿ' ಎಂಬ ವಿಮರ್ಶಾಲೇಖನ ಬೇಂದ್ರೆಯವರು ಬರೆದಿರುವ ಉತ್ತಮವಿಮರ್ಶೆಯಾಗಿದೆ ಮತ್ತು ವಿಮರ್ಶೆಯ ಒಡಲಿನಲ್ಲಿ ಸಂಶೋಧನೆಯೂ ಅಡಕಗೊಂಡಿದೆ. ".....ಬಹುತರವಾಗಿ ಎಲ್ಲರೂ 'ಗದಾಯುದ್ಧ'ದಲ್ಲಿ (ಕವಿಚಕ್ರವರ್ತಿ ರನ್ನನ–ಶ್ರೀಮಾನ್ ಶ್ರೀಕಂಠಯ್ಯನವರದಲ್ಲ) ವೀರರಸವೇ ಪ್ರಧಾನವೆಂದೂ, ದುರ್ಯೋಧನನೊಬ್ಬ 'ಮಹಾನುಭಾವ' ಎಂದರೆ 'ದೈವಭಕ್ತಿಯುಳ್ಳ ಸತ್ಪುರುಷ' ಎಂದೂ ಭ್ರಮಿಸಿದ್ದಾರೆ. ಇದು ಎಷ್ಟುಮಟ್ಟಿಗೆ ನಿಜ ಎಂಬುದನ್ನು ನಾವು ವಿಮರ್ಶಿಸದೆ ಬಿಡಲು ಬರುವಂತಿಲ್ಲ"[೨೫] " 'ರನ್ನ ಕವಿಪ್ರಶಸ್ತಿ'ಯು 'ದುರ್ಯೋಧನಪ್ರಶಸ್ತಿ'ಯಾಗಿಬಿಟ್ಟಿದೆ. ಅವನು 'ಮಹಾನುಭಾವ' ಎಂದು ಎಲ್ಲರ ಗ್ರಹಿಕೆ. ..... 'ಮಹಾನುಭಾವ' – ಈ ಪದಕ್ಕೆ ಕಿಟ್ಟೆಲ ಶಬ್ದ ಕೋಶದಲ್ಲಿ 'mighty' ಎಂದು ಒಂದು ಅರ್ಥವನ್ನು ಕೊಟ್ಟಿದ್ದಾಗಿದೆ; 'ಅನುಭಾವ' ಪದಕ್ಕೆ mighty, power, firm opinion(ಚಲ?) ಎಂಬ ಅರ್ಥವನ್ನು ಕೊಟ್ಟಿದ್ದಾಗಿದೆ. ಆಪ್ಟೆಯವರ ಸಂಸ್ಕೃತಕೋಶದಲ್ಲಿಯೂ ಈ ಅರ್ಥವಿದೆ. ರನ್ನನ 'ಮಹಾನುಭಾವ' ಶಬ್ದಕ್ಕೆ ಈ ಅರ್ಥವಿರಲಾರದೆ ? ವಾಗ್ವಿಭವೋನ್ನತನಾದ ಕವಿತಾಗುಣಾರ್ಣವ ಪಂಪನ ಛಾಯೋಪಜೀವಿ ಕವಿರನ್ನನ 'ಮಹಾನುಭಾವ' ಶಬ್ದದ ಮೂಲವಾದರೂ ಪಂಪನಲ್ಲಿ ಇರುವುದು ಅಸಂಭವವಲ್ಲ. ವಿಕ್ರಮಾರ್ಜುನವಿಜಯದ ೧೩ನೆಯ ಅಧ್ಯಾಯ ೨೦ನೆಯ ಶ್ಲೋಕದ ತರುವಾಯದ ಗದ್ಯದಲ್ಲಿ 'ಸಂಸಾರಾಸಾರತೆಯನರಿದನುಂ ಮಹಾಸತ್ವನಪ್ಪುದರಿಂ ತನ್ನಂ ತಾನೆ ಸಂತೈಸಿಯುಂ ಚೇತರಿಸಿಯುಂ' ಎಂಬ ಮಾತಿದೆ. ಇದರೊಳಗಿನ 'ಮಹಾಸತ್ವ' ಪದವೆ ರನ್ನನಲ್ಲಿ 'ಮಹಾನುಭಾವ' ಎಂದಾಗಿರಲಾರದೇ ?"[೨೬] ಎಂದು 'ಮಹಾನುಭಾವ' ಪದದ ಸರಿಯಾದ

ಅರ್ಥವನ್ನು ಸ್ಪಷ್ಟಪಡಿಸುತ್ತಾ; ರನ್ನನನ್ನು 'ಪಂಪನ ಛಾಯೋಪಜೀವಿ' ಎಂದು ಕರೆದು ಉತ್ತಮ ವಿಮರ್ಶಾಗುಣ ಮೆರೆದಿದ್ದಾರೆ. "...'ಮಹಾನುಭಾವ' ಪದಕ್ಕೆ 'ಸತ್ಪುರುಷ' ಎಂದು ಸಾಧಿಸುವುದು ಈ ವಿಮರ್ಶಕರಿಗೆ ಸುಲಭವಾಗಿಲ್ಲ. ಎಷ್ಟೋಸಲ ತಿಳಿದೂ ತಿಳಿಯದೆಯೂ ಅವರು ಮೋಸಹೋಗಬೇಕಾಗಿದೆ."[೨೭] ಎಂದು ವಿಮರ್ಶಕರು ಮೋಸಹೋದದ್ದನ್ನು ತಿಳಿಸುತ್ತ; ತಮ್ಮ ಸ್ಪಷ್ಟ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ಸರ್ವಜ್ಞ :** 'ಸರ್ವಜ್ಞಕವಿ' ಎಂಬ ಲೇಖನದಲ್ಲಿ ಸರ್ವಜ್ಞನನ್ನು ಕುರಿತು "......ಮಾತಿನ ಔಚಿತ್ಯ, ಉಪಮೆಯ ಸಮರ್ಪಕತೆ, ದೃಷ್ಟಾಂತದ ಸಮೀಪತೆ, ಅನುಭವದ ವಿಶಾಲತೆ, ಅವಲೋಕನದ ಸೂಕ್ಷ್ಮತೆ, ಇವುಗಳನ್ನು ಹವಣಾಗಿ ಅಭ್ಯಾಸ ಮಾಡಬೇಕಾದರೆ ಸರ್ವಜ್ಞ ವಚನಗಳಂಥ ಬೇರೆ ಪುಸ್ತಕವಿಲ್ಲ. ಇಲ್ಲಿಯ ನೀತಿಯು ಬರಡು ಮಾತಲ್ಲ; ರಸಮಯವಾದ ಸುಭಾಷಿತ, ಹಾಸ್ಯದ ವಿವಿಧ ಲಾಸ್ಯವು ಇಲ್ಲಿ ಮೂಡಿದೆ. ಸರಸದ ಸವಿನಗೆಯಿದೆ, ಜ್ಞಾನಿಯ ಬೆರಗು ನಗೆಯಿದೆ, ವೀರನ ಮಾರ್ಮಿಕ ನಗೆಯಿದೆ."[೨೮] ಎಂದು ನುಡಿದಿದ್ದಾರೆ.

ಈ ಕೃತಿಯಲ್ಲಿ ಬೇಂದ್ರೆಯವರು ಶ್ರೀ ಅರವಿಂದರ 'ದಿವ್ಯಜೀವನ'ವನ್ನು ಕನ್ನಡಿಸಿದ್ದಾರೆ ಮತ್ತು ಅವರ ವಿಚಾರಧಾರೆ ಕುರಿತು ಲೇಖನಗಳನ್ನು ಬರೆದಿದ್ದಾರೆ. ಶ್ರೀ ಅರವಿಂದರ 'ಜೀವನಧರ್ಮ ಮತ್ತು ಕಾವ್ಯಧರ್ಮ' ಎಂಬ ಲೇಖನದಲ್ಲಿ "ಮಾನವರ ಬುದ್ಧಿ ಭಾವನೆಗಳು ದೇವಹೃದಯಯುಕ್ತವಾಗಿಲ್ಲ. ಈ ಯುಕ್ತಿಯನ್ನು ಎತ್ತಿ ಹಿಡಿಯುವ ಅತಿ ಮಹಾನ್ ಕಾವ್ಯ – ಶ್ರೀ ಅರವಿಂದರ 'ಸಾವಿತ್ರಿ', ಪಾಶ್ಚಾತ್ಯರ 'paradise lost' 'promethuous unbound' 'divine comedy' 'wasteland', ಇವೆಲ್ಲವುಗಳಿಗೂ ಸಮಸ್ಯೆ ಆದದ್ದಕ್ಕೆ 'ಸಾವಿತ್ರಿ'ಯಲ್ಲಿ ಉತ್ತರವಿದೆ"[೨೯] ಎಂಬ ವಿಮರ್ಶಾದೃಷ್ಟಿಯ ಸ್ಪಷ್ಟ ನಿಲುವು ಅವರದಾಗಿದೆ.

ಬೇಂದ್ರೆಯವರು ೧೯೪೩ರಲ್ಲಿ ಶಿವಮೊಗ್ಗದಲ್ಲಿ ನಡೆದ ೨೭ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಮಾಡಿದ ಭಾಷಣ 'ಸಾಹಿತ್ಯದ ವಿರಾಟ್ ಸ್ವರೂಪ', ಅದರಲ್ಲಿ 'ನಮ್ಮ ಸಾಹಿತ್ಯ ಸಂಸ್ಕೃತಿ ಇತಿಹಾಸಗಳ

ಸಂಜೀವನವನ್ನುಣ್ಣದೆ ನಾವು ಕನ್ನಡಿಗರಾಗಲಾರೆವು. ಕರ್ನಾಟಕಸ್ಥರಾಗುವುದು ಬೇರೆ, ಕನ್ನಡಿಗರಾಗುವುದು ಬೇರೆ. ನಮ್ಮ ಸಾಹಿತ್ಯ, ನಮ್ಮ ದಿನದ ಮಾತು ಜನದ ಮಾತು, ಮನದ ಮಾತು ಆಗಬೇಕು' ಎಂದು ಕರೆಕೊಟ್ಟರು. ಆ ಭಾಷಣದ ಲೇಖನವನ್ನೂ ಸೇರಿಸಿ ಒಟ್ಟು ೧೨೮ ಲೇಖನಗಳು ಈ ಬೃಹತ್ ಕೃತಿಯಲ್ಲಿದೆ. ಇದನ್ನು ದೃಷ್ಟಿ-ದರ್ಶನ, ಕವಿ-ಕೃತಿ, ಕರ್ನಾಟಕ-ಮಹಾರಾಷ್ಟ್ರ ಮತ್ತು ವಿಚಾರ-ವಿವೇಕ ಎಂದು ನಾಲ್ಕು ಭಾಗಗಳನ್ನಾಗಿ ಮಾಡಿದ್ದಾರೆ. ಪ್ರತಿ ಲೇಖನವನ್ನು ಓದಿ ಸವಿದಾಗ ಬೇಂದ್ರೆಯವರ ವಿಮರ್ಶಕ, ಸಂಶೋಧಕ ಗುಣ ಅರಿವಾಗುತ್ತದೆ.

# ಸಾಹಿತ್ಯಸಿದ್ಧಿ : ಸಣ್ಣ ಕಥೆಗಳು

ಬೇಂದ್ರೆಯವರು ಬರೆದಿರುವ ಒಟ್ಟು ಕಥೆಗಳು ೧೬. ಅವರು 'ನನ್ನ ನುಡಿ'ಯಲ್ಲಿ ನುಡಿದಿರುವಂತೆ 'ನಮನಮಗೆ ಬಂದು ಬಡೆದುಕೊಂಡ ಕತೆಗಳಿಂದ ಬಿಡಿಸಿಕೊಳ್ಳಬೇಕಾದರೆ ಆಡಿ ತೋಡಿಕೊಳ್ಳುವುದೇ ಹಾದಿ' ಎಂದು ರಚಿಸಿದವುಗಳು ೮. ಅವು 'ನಿರಾಭರಣಸುಂದರಿ' ಕಥಾಸಂಕಲನದಲ್ಲಿವೆ. ಮಿಕ್ಕ ೮ ಕಥೆಗಳು ಅನುವಾದಗಳು. ಅವು 'ಚೀನದ ಬಾಳುಬದುಕು' ಕಥಾಸಂಗ್ರದಲ್ಲಿವೆ. ಅವುಗಳ ಜೊತೆಗೆ ಅವರು ಉಪನ್ಯಾಸಗಳಲ್ಲಿ ಹೇಳುತ್ತಿದ್ದ ಕಥೆಗಳಲ್ಲಿ ಮೂರು ಕಥೆಗಳನ್ನು 'ಬೇಂದ್ರೆಯವರ ಮಾನಸಕಥೆಗಳು' ಎಂದು ವಾಮನ ಬೇಂದ್ರೆಯವರು ರಚಿಸಿದ್ದಾರೆ.

ಮಲ್ಲಿ : 'ನಿರಾಭರಣಸುಂದರಿ' ಚಿತ್ರಗಾರ ಪದ್ಮ. ಅವನು ಮಧ್ಯರಾತ್ರಿಯಾದರೂ ಚಿತ್ರ ರಚನೆಯಲ್ಲಿ ತೊಡಗಿರುವುದನ್ನು ಕಥೆಗಾರ ಬೇಂದ್ರೆಯವರು 'ಅವನ ಬಣ್ಣ ವಣ್ಣಿಗೆಯ ಸ್ಪರ್ಶಸ್ಪರ್ಶಕ್ಕೂ ಚಿತ್ರದ ರೂಪು ಕಣ್ದೆರೆವಂತಿತ್ತು. ಅವನ ಚಿತ್ತದೊಳಗಿನ ಮೂರ್ತಿಯು ಚಿತ್ರದಲ್ಲಿ ಮೂಡಿದಂತೆ, ಅವನ ಮುಖದಲ್ಲಿ ತೃಪ್ತಿಯು ತುಂಬುತ್ತಿತ್ತು. ಕಣ್ಣಿನ ಬಣ್ಣವೇರುತ್ತಿತ್ತು' ಎಂದು ಬಣ್ಣಿಸಿದ್ದಾರೆ. ಇಂತಹ ಭಾವನಾಲೋಕದ ಕಥೆ ಇದಾಗಿದೆ. 'ಚಿತ್ರವು ಚಿತ್ರಕನನ್ನೇ ನುಂಗಿದಂತಿತ್ತು. ಅವನಿಗೆ ತನ್ನರಿವೂ ಇರಲಿಲ್ಲ'. ಆಗ ಎಚ್ಚೆತ್ತ ಪತ್ನಿ ನಾಗಶ್ರೀ ಪತಿಯನ್ನು ಮಾತನಾಡಿಸಬೇಕೆಂದಿದ್ದರೂ ತುಟಿತೆರೆಯದೆ ಚಿತ್ರವಸ್ತು 'ನಿರಾಭರಣಸುಂದರಿ'ಯನ್ನು ನೋಡಿ ಜಿಗುಪ್ಸಾಮನದವಳಾಗುತ್ತಾಳೆ. ಆಗಿನ ಅವರಿಬ್ಬರ ಸಂಭಾಷಣೆ ಚತುರ ಸಂಭಾಷಣೆಯಾಗಿದೆ. ನಿಧಾನವಾಗಿ ಅವಲೋಕಿಸಿದಾಗ ಕವಯಿತ್ರಿಯಾದ ನಾಗಶ್ರೀಯ ಚಿತ್ತಕ್ಕೆ ಆ ಚಿತ್ರವು 'ತನ್ನ ಜೀವಜೀವಾಳದ ನಿರಂಜನ ಪ್ರಕೃತಿಯೆ ಆಕಾರತಾಳಿದಂತೆ ಹೊಳೆಯುವುದು'.

ಆಗ ಆ ಚಿತ್ರವನ್ನು ಎತ್ತಿ ಮುದ್ದಿಟ್ಟು ಕಣ್ಣಿಗೊತ್ತಿ ಎದೆಗಪ್ಪಿಕೊಳ್ಳುವಳು. ಜಿನಯೋಗಿಯ ಆತ್ಮಬಿಂಬದ 'ನಿರಾಭರಣಸುಂದರಿ'ಗೆ ಪದ್ಮನು 'ಮಲ್ಲಿ' ಎಂದು ಕರೆಯುವನು.

ನಾಗಚಂದ್ರನ ಮಲ್ಲಿನಾಥಪುರಾಣವನ್ನು ಅಭ್ಯಾಸಮಾಡಿ ಸವಿದ ಬೇಂದ್ರೆಯವರು ಮಲ್ಲಿನಾಥನನ್ನು ಜೈನರ ಒಂದು ಪಂಗಡದವರು ಹೆಣ್ಣೆಂದೂ; ಇನ್ನೊಂದು ಪಂಗಡದವರು ಗಂಡೆಂದೂ ಆರಾಧಿಸುವ ಹಿನ್ನೆಲೆಯಲ್ಲಿ ತಮ್ಮ ಭಾವಲೋಕದ ಕಥೆಯಾಗಿ 'ನಿರಾಭರಣಸುಂದರಿ'ಯನ್ನು ಹೆಣೆದಿದ್ದಾರೆ ಎನಿಸುತ್ತದೆ. ಹೆಣ್ಣೆಂದು ಕರೆದ ಜೈನಸಂಪ್ರದಾಯದವರ 'ಮಲ್ಲಿ'ಯೇ ಬೇಂದ್ರೆಯವರಲ್ಲಿ ಕಥಾರೂಪ ಧರಿಸಿರುವ 'ನಿರಾಭರಣಸುಂದರಿ'.

**ಮಗುವಿನ ಕರೆ** : ಈ ಕಥೆ ಬೇಂದ್ರೆಯವರ ಕವನದಂತೆ, ಒಂದು ಭಾವದ ಕವಲಿನಂತೆ ಹಲವು ಹರವುಗಳನ್ನು ಪಡೆಯುತ್ತಾ ಸಾಗುವ ಕಥೆಯಾಗಿದೆ. ಜೀವನದಲ್ಲಿ ಬೇಸತ್ತ ಶಾಸ್ತ್ರಿಗಳ ಸೊಸೆಯ ಮನದ ಭಾವಗಳನ್ನು ಇಲ್ಲಿ ಚಿತ್ರಿಸಿದ್ದಾರೆ. ಆ ನಿಸ್ಸಹಾಯಕ ಸಂಸಾರದ ಬಡವರ ಸೊಸೆಯಾದ ತಾನು ಯಾರಿಗೂ ಬೇಕಾಗಿಲ್ಲವೆಂದು ಬಾವಿಗೆ ಬೀಳಲು ಹೋದಾಗ ಅವಳ ಕೂಸಿನ ಅಳು ಅವಳ ಒಳಮನವನ್ನು ಎಚ್ಚರಿಸುತ್ತದೆ. 'ಅದಕ್ಕೆ ತಾನಲ್ಲದೆ ಯಾರು ?' ಎಂದು ಕೊಡಸೇದಿ ಹಿಂದಿರುಗುತ್ತಾಳೆ.

**'ಪಾಲಾಫೂ !'** : 'ಪಾಲಾಫೂ' ಎಂದರೆ ಜತೆಬಿಡುವುದು, ಠೂ ಬಿಡುವುದು ಎಂದು ಅರ್ಥ. ಪ್ರಹ್ಲಾದ ಮತ್ತು ರಾಮ ಎಂಬ ಗೆಳೆಯರಲ್ಲಿ ಮಕ್ಕಳಾಟದ ಮಾತು ಮಾತಿನಲ್ಲಿ ಬರುವ 'ಪಾಲಾಫೂ', ಪ್ರಹ್ಲಾದನ ಸಾವಿನಲ್ಲಿ ಅಂತ್ಯವಾಗುತ್ತದೆ. ಆದರೆ ಅಂತಹ ಗೆಳೆಯನನ್ನು ಕಳೆದುಕೊಂಡೆನಲ್ಲ ಎಂಬ ಕೊರಗು ರಾಮನನ್ನು ಕಾಡುತ್ತದೆ. ಮಕ್ಕಳ ಮನಸ್ಸನ್ನು ಸಹಜವಾಗಿ ಕಾಡುವ ಭಾವನೆಗಳನ್ನು ಬೇಂದ್ರೆಯವರು ಸಹಜವಾಗಿ ಚಿತ್ರಿಸಿದ್ದಾರೆ. ಹೀಗೆ ಬೇಂದ್ರೆಯವರು ರಚಿಸಿರುವ ಕಥೆಗಳಲ್ಲಿ ಜೀವಭಾವವಿದೆ, ಸಹಜೀವನದ ನಾದವಿದೆ. ಇನ್ನಿತರ ಕಥೆಗಳಾದ 'ಕಥೆಗಳಕಥೆ', ಹಿರಿದಗತ್ತಿ', 'ಮಂಗಾಟ', 'ನಾಸ್ತಿಕ', 'ಏಕಾಕಿನಿ'ಯನ್ನು ಓದಿಯೇ ಸವಿಯಬೇಕು.

**ಮೆಕ್ಕಿ ಕುನ್ನಿ :** 'ಮೆಕ್ಕಿ ಕುನ್ನಿ' , 'ಕಲಗಡಗಿ ಹಣಮಪ್ಪಾ', 'ಸಕ್ಕರಿಗಿಣಿ' ಎಂಬ ಮೂರು ಕಥೆಗಳು ಬೇಂದ್ರೆಯವರ ಮಾನಸ ಕಥೆಗಳು. ಇವುಗಳನ್ನು ಆಧರಿಸಿ ಸಂಭಾಷಣೆಯ ರೂಪದಲ್ಲಿ ಕುತೂಹಲ ಹುಟ್ಟುವಂತೆ ವಾಮನ ಬೇಂದ್ರೆಯವರು ಪ್ರತ್ಯೇಕ ಸಣ್ಣಕತೆಗಳಾಗಿ ರಚಿಸಿದ್ದಾರೆ. ಮುಗ್ಧೆ ದ್ಯಾಮವ್ವನ ಕಥೆಯಾದ 'ಮೆಕ್ಕಿ ಕುನ್ನಿ' ಒಂದು ಮನಮಿಡಿಯುವ ಜೀವದಯಾಪರ ಕಥೆ. ತನ್ನ ಮೊಮ್ಮಕ್ಕಳ ಪ್ರಾಣ ಆ ನಾಯಿಕುನ್ನಿ–ಮೆಕ್ಕಿ ಕುನ್ನಿಯ ಮೇಲೆ. 'ಅವರು ಮೆಕ್ಕಿ ಕುನ್ನಿ ಅಂತಿದ್ದರು ಅಂತ ನಾನೂ ಅಂತೇನಿ' ಎಂದು ಹೇಳುವ ದ್ಯಾಮವ್ವ ಗುಡಿಯ ಪೂಜಾರಿ ಶಿವಪಾದಸ್ವಾಮಿಗೆ 'ಪ್ರತಿಅಮಾಸಿ ಮಂಗಳವಾರ ಕುನ್ನಿ ಹೆಸರಲೇ ಒಂದು ದೀಪ ಬೆಳಗು' ಎಂದು ಹತ್ತು ರೂಪಾಯಿ ನೀಡುತ್ತಾಳೆ. ಕಾರಣ ಕೇಳುವ ಪೂಜಾರಿಗೆ ಹೇಳಿದ ಕಥೆ : ಮಳೆಯಲ್ಲಿ ತೊಯ್ದುಬಂದ ಮೊಮ್ಮಕ್ಕಳು 'ಕುನ್ನಿನೂ ಒಳಗೆ ತಗೋ ಅಜ್ಜಿ' ಎಂದಾಗ ಕೋಪಗೊಂಡ ಅಜ್ಜಿ ದ್ಯಾಮವ್ವ ಮೆಕ್ಕಿ ಕುನ್ನಿನ ಕಸಗೊಂಡು ಬೀದಿಗೆ ಬಿಟ್ಟಾಗ ಎಲ್ಲಿಂದೊ ಬಂದ ಟ್ರಕ್ಕು ಮೆಕ್ಕಿ ಕುನ್ನಿ ಮ್ಯಾಲೆ ಹಾದುಹೋಗುತ್ತದೆ. ಆ ತನ್ನ ತಪ್ಪಿನ ಒಪ್ಪು ದೇವರ ಮುಂದೆ ತೀರಿಸುವ ದ್ಯಾಮವ್ವನ ಚಿತ್ರ ಈ ಕತೆಯಲ್ಲಿದ್ದು; ಜೀವದ ಮಿಡಿತ ಹಾಡುವ ಕತೆ ಇದಾಗಿದೆ.

# ಸಾಹಿತ್ಯಸಿದ್ಧಿ : ಮಾತೆಲ್ಲ ಜ್ಯೋತಿ

ಬೇಂದ್ರೆಯವರಿಗೆ ಮಾತು ಕಾವ್ಯದಷ್ಟೆ ತೀವ್ರ, ಕ್ರಿಯಾಶೀಲ, ಅರ್ಥಪೂರ್ಣ ಬದುಕಾಗಿತ್ತು. ಬೇಂದ್ರೆಯವರ ನುಡಿ ಮುತ್ತಾಗಿ, ಮಾತೆಲ್ಲ ಜ್ಯೋತಿಯಾಗಿ ಬೆಳಗಿತು. ಆ ಮುತ್ತಿನ ಹೊಳಪಿನ ಜ್ಞಾನಪ್ರಭೆಯಲ್ಲಿ ನಮ್ಮ ಕಣ್ಣಿನ ಬೆಳಕನ್ನು ಕಂಡು, ಆ ಮಾತಿನ ಜ್ಯೋತಿಯಲ್ಲಿ ನಮ್ಮ ಅರಿವನ್ನು ಸ್ಪಷ್ಟಗೊಳಿಸಿಕೊಳ್ಳೋಣ. ಅವರ ಮಾತಿನ ಗಾರುಡ್ಡಿಗೆ ಸೋಲದವರಿರಲಿಲ್ಲ. ಅವರು ಜನಪ್ರೀತಿಯಿಂದ ಕರೆದಕಡೆ ಹೋಗಿ ನಾಡುನುಡಿ, ಧರ್ಮ, ಶಿಕ್ಷಣ, ಸಮಾಜ, ವಿಚಾರ ಸಾಹಿತ್ಯದ ರಸಗಂಗೆಯನ್ನು ಮಾತಿನಝರಿಯಲ್ಲಿ ಅರ್ಪಿಸುತ್ತಿದ್ದರು. ಕನ್ನಡಜನತೆಯ ನೆಚ್ಚಿನ ಕವಿಯಾದರು. ಅವರು ಆಡಿದ ಮಾತು ನಮ್ಮ ಬಾಳಿನ ದೀವಿಗೆಯಂತಿದೆ. ಅವುಗಳನ್ನು ಸವಿಯಬೇಕು. ಅವರ ಭಾಷಣಗಳ ಸಂಗ್ರಹವಾದ 'ಮಾತೆಲ್ಲ ಜ್ಯೋತಿ' ಮತ್ತು ವೈಚಾರಿಕ ಬರಹವಾದ 'ವಿಚಾರಮಂಜರಿ'ಯಲ್ಲಿರುವ ಕೆಲವು ಮಾತಿನ ಕಿರಣಗಳ ಪ್ರಭೆಯಲ್ಲಿ ವೈಚಾರಿಕ ಚಿಂತನೆಯನ್ನು ಬೆಳೆಸಿಕೊಳ್ಳೋಣ.

## ಮಾತೆಲ್ಲ ಜ್ಯೋತಿ

- 'ಅನಸೂಯೆ' ಇಲ್ಲದಿರುವಲ್ಲಿ ಮೈತ್ರಿ ಆಗುವುದು ಅಸಾಧ್ಯ.
- ತಿಳುವಳಿಕೆಯ ಒಂದು ದುರ್ಗುಣವೆಂದರೆ 'ತಿಳಿದುಬಿಟ್ಟಿತು' ಎನ್ನುವ ಭಾವ. ಇದು ಅದರ ದೋಷ.
- ಗಂಗೆ ಹರಿದಷ್ಟೂ ತಿಳಿಯುತ್ತಾ ತಿಳಿಯುತ್ತಾ ಹೋಗುತ್ತದೆ ! ತಿಳಿಯಾಗುತ್ತದೆ! ಎಷ್ಟು ತಿಳಿಯಾಗುತ್ತದೆ ಎಂದರೆ, ತಿಳಿ ಹೋಗಿಸುವಂಥ, ಕದಡುಮಾಡುವಂಥ ಕ್ರಿಮಿಗಳು ಅದರಲ್ಲಿ ಬದುಕಲಾರವು.

- ಬದುಕಲು ಶಿಕ್ಷಣಬೇಕು. ಬಾಳಬೇಕಾದರೆ ಸಂಸ್ಕೃತಿಬೇಕು ಕನ್ನಡದಲ್ಲಿ ಬದುಕುವುದು ಬಾಳುವುದು ಅಂತ ಮಾತು ಇವೆ. ಬದುಕುವವರೆಲ್ಲ ಬಾಳು ಮಾಡುವುದಿಲ್ಲ.
- ಮನುಷ್ಯನಿಗೆ ಏನಿಲ್ಲ ಅಂದರೆ ದಾನ ಬುದ್ಧಿ ಇಲ್ಲ. ದಾನ ಬುದ್ಧಿ ಎಷ್ಟಿಲ್ಲ ಅಂದರೆ ತನ್ನ ಹತ್ತಿರ ಇದ್ದದ್ದು ತಿಂದುಬಿಟ್ಟರೆ ಹೋಯಿತು ಅಂತ ತಿನ್ನದೆ ಪ್ರಾಣಬಿಟ್ಟಾನು–ಆದರೆ ಇನ್ನೊಬ್ಬರಿಗೂ ಕೊಡಲಿಕ್ಕಿಲ್ಲ. ಪ್ರಾಣಬಿಟ್ಟು ಇದ್ದ ದುಡ್ಡಿನ ಬಗ್ಗೆ ಭೂತವಾಗಿ ಬಿಡ್ತಾನೆ.
- ಸಂಸ್ಕೃತಿಯ ಫಲ ಒಳಗೇ ಇರುತ್ತದೆ. 'ಕಲ್ಚರ್' ಇದು ಮಹತ್ವದ ಪದ. ಕೃಷ್ಣ–ಕೃಷಿಮಾಡಬೇಕು. ಕೃಷಿಮಾಡಬೇಕು. ಅದರೊಳಗಿನ ಕರ್ಷಣ ಮಾಡಬೇಕು, ಉತ್ಕೃಷ್ಟಮಾಡಬೇಕು.
- ಶಿಕ್ಷಣವನ್ನು ಸರಿಯಾಗಿ ಉಪಯೋಗಿಸಲು ಸಂಸ್ಕೃತಿಬೇಕು.
- ಕಾಣಿಸುವ ವಸ್ತುವಿಗೂ ಇರುವ ವಸ್ತುವಿಗೂ ಮಹದಂತರ ಇದ್ದು ಬಿಡುತ್ತದೆ! ಕಾಣಿಸುವ ಮಾತು ಅಷ್ಟು ಮುಖ್ಯವಲ್ಲ. ಇರುವ ಮಾತು ಮುಖ್ಯ.
- ನಮ್ಮ ಒಳಗಿನ ಇಚ್ಛೆಯನ್ನು ತಿದ್ದಿಕೊಳ್ಳದೆ, ಹೊರಗೆ ಇತಿಹಾಸ ಬರಲಾರದು.
- ಇನ್ನೊಬ್ಬರೊಳಗೆ ಮೂಗು ಹಾಕುವುದಕ್ಕಿಂತ, ತಮ್ಮೊಳಗೆ ಕಣ್ಣು ಹಾಕುವುದು ಒಳ್ಳೆಯದು. "ನಾನು ಹೇಗೆ ಇರುತ್ತಾ ಬಂದಿದ್ದೇನೆ ? ಹೇಗೆ ಇರಬೇಕು? ಏನಾಗಬೇಕು?" ಇಂಥ ಪ್ರಶ್ನೆ ಕೇಳುವ ಹತ್ತು ಹೊಸ ಹುಡುಗರು ಸಿದ್ಧರಾಗಲಿ. ಅನಂತರ ಅವರ ಜತೆಗೆ ನೂರು ಹುಡುಗರು ಆಗುತ್ತಾರೆ, ನೂರು ಸಾವಿರ ಆಗುತ್ತಾರೆ! ಒಳ್ಳೆಯ ಕಾಲ ಬರುತ್ತದೆ.
- ನಾವು ಏನೇನು ನೋಡುತ್ತೇವೋ, 'ಇಟ್ ಈಸ್ ಜಸ್ಟ್ ಎ ಫ್ಯಾಕ್ಟ್', ನಾವು ಏನೇನು ಬರೆಯುತ್ತೇವೋ 'ಇಟ್ ಈಸ್ ಆರ್ಟ್' .
- 'ಹೀರೋಯಿಸಂ' ಎಂಬುದು ಇರುವುದರಲ್ಲಿದೆ, ಸಾಯುವುದರಲ್ಲಿಲ್ಲ.
- ದುಡ್ಡು ಎಲ್ಲರ ಕೈಯಲ್ಲೂ ಇರಬಹುದು. ಆ ದುಡ್ಡು ಇರುವುದು ಫ್ಯಾಕ್ಟ್. ಅದು ದೊಡ್ಡದಲ್ಲ. ಆ ದುಡ್ಡನ್ನು ಯಾವ ಮಹತ್ತರ ಅರ್ಥಕ್ಕಾಗಿ ಕೊಟ್ಟು ಆ ಅರ್ಥವನ್ನು ಪಡೆಯುತ್ತೀರೋ, ಅಲ್ಲಿ ಇದೆ ನಿಮ್ಮ ಜೀವನದ ಸಾರ್ಥಕ್ಯ.

- ಜೀವನವು ತಾಪದ ಕ್ಷೇತ್ರವಲ್ಲ ತಪದ ಕ್ಷೇತ್ರ.
- ಕಣ್ಣಿನಿಂದ ಎಲ್ಲ ನೋಡಬಹುದು; ಚಿಂತನಕ್ಕೆ ಮಾತ್ರ ಒಳ್ಳೆಯದನ್ನೇ ತೆಗೆದುಕೊಳ್ಳಬೇಕು.
- ಕವಿಗಳು ಎಂಬುವರು ದೊಡ್ಡವರು, ಅವರು ಹೇಳಿದಾಗ ಕಿವಿಗೆ ಬಿದ್ದ ಅವರ ಮಾತುಗಳು, ಆಮೇಲೆ ಚಿಂತಿಸಿದಾಗ ಹೊಳೆಯುತ್ತಾ ಇರುತ್ತವೆ. ಆದಕಾರಣ ಕವಿ ಇದ್ದಾಗ ಕವಿ ಆಗುವುದಿಲ್ಲ, ಸತ್ತಮೇಲೆ ಅಮರಕವಿ ಆಗಿಬಿಡುತ್ತಾನೆ. ಅಮರಕವಿಯಾಗಲಿಕ್ಕೆ ಇರುವುದು ಏನು ಅಗತ್ಯ? ಸತ್ತರೂ ಯಾರನ್ನೂ ಮರೆಯಲಿಕ್ಕೆ ಬರುವುದಿಲ್ಲವೊ ಅವನು ಅಮರ.
- 'ಸಹಭಾವ'ವನ್ನು ಬಿತ್ತುವುದೇ ಸಾಹಿತ್ಯದ ಕೆಲಸ.
- ತಾಳಿದವ ಬಾಳಿಯಾನು-ತಾಳಬೇಕು, ಬಾಳಬೇಕೋ ತಾಳಬೇಕು-ತಾಳಬೇಕೋ ಮೇಳಬೇಕು. ಈ ತಾಳಮೇಳ ಇದು ಬಾಳತಕ್ಕ ಮನೆಯಲ್ಲಿ ಕಲಿಸತಕ್ಕ ಮಾತು. ಇದಕ್ಕೆ ತಕ್ಕ ಅನ್ನವನ್ನು ಮನೆಮನೆಯಲ್ಲಿ ಗೃಹಿಣಿಯರು ಮಾಡತಕ್ಕದ್ದು.
- ರಾಮನಾಗಲಿ ಕಾಮನಾಗಲಿ ಮನೆ ಒಡತಿ ಇಲ್ಲದೆ, ಮಡದಿ ಇಲ್ಲದೆ ಎಂಥಾ ಶಕ್ತಿ ಇದ್ದವನಿಗೂ ರಮಣೀಯತೆ ಬರಲಾರದು.
- ಅನ್ನ ಕೇವಲ ಮನುಷ್ಯನಿಗಾಗಿ ಅಲ್ಲ, ಎಲ್ಲ ಜೀವಜಾತಕ್ಕಾಗಿ ಇರುತ್ತದೆ.
- ಅನ್ನದಿಂದ ಇಂದು ಏನಾದರೂ ಪಚನಮಾಡುವುದಿದ್ದರೆ, ನಮ್ಮ ವೈರಬುದ್ಧಿಯನ್ನು ಪಚನಮಾಡಬೇಕು. ಅದು ನಮ್ಮ ಅನ್ನವನ್ನೆಲ್ಲ ಆಹುತಿಗೊಂಡು ವೈರವೃದ್ಧಿ ಮಾಡುತ್ತಿದೆ.
- ವಿದ್ಯೆ ಎಂಬುದು ತೀರುವುದೇ ಇಲ್ಲ. ವಿದ್ಯೆ ತೀರಬೇಕು ಎನ್ನುವವನು ತೀರಿಹೋಗುತ್ತಾನೆ; ತೀರುವುದಿಲ್ಲ.
- ನಮಗೋ ಇನ್ನೊಬ್ಬರು ಕಡಿಮೆ ಆಗಿ, ನಾವು ಹೆಚ್ಚಾಗಬೇಕು ಎನ್ನುವ ಭಾವನೆ. ಇನ್ನೊಬ್ಬರು ಕಡಿಮೆ ಆಗಿ, ನಾವು ಹೆಚ್ಚಾಗುವುದು ಎಂಥ ಹೆಚ್ಚು? ಹೆಚ್ಚೆಂದರೆ, ಭಾರವಾಗುವುದು, ಕೆಳಗೆ ಕೂತುಬಿಡುವುದು!

- ಅಯ್ಯೋ ದೇವರನ್ನು ಒಪ್ಪಿಕೊಳ್ಳುವ ಜನರೇ, ಆ ಮನುಷ್ಯನಲ್ಲಿ ದೇವರಿಲ್ಲವೇ? ಅಯ್ಯೋ ಮನುಷ್ಯನನ್ನು ಒಪ್ಪಿಕೊಳ್ಳುವಂಥ ಜನರೇ, ಆ ದೇವರಂತೆ ಕಾಣುವುದರಲ್ಲಿ ಮನುಷ್ಯನನ್ನು ಕಾಣಲಿಲ್ಲವೇನು? ಈ ಮನುಷ್ಯ, ಈ ದೇವರು ಒಬ್ಬರಲೊಬ್ಬರು ಸೇರಿಕೊಂಡು, 'ಹಾರ್ಮೊನೈಸ್' ಮಾಡಬೇಕು.
- ಯಾವನ ನಾಡಿಯೇ ನಡೆಯುವುದಿಲ್ಲವೋ, ಅವನ ನಾಡು ಹೇಗೆ ನಡೆಯುತ್ತದೆ? ನಾಡಿಯಲ್ಲಿ ಜೀವವಿಲ್ಲದಿದ್ದರೆ, ನಾಡು ಹೇಗೆ ನಡೆಯಬೇಕು?
- ದೈವಕ್ಕೆ ಶರಣುಹೋಗುವುದರಿಂದಲೇ ಶಾಂತಿಯ ನೆಲೆ ದೊರೆತೀತು. ಆ ದೈವಪ್ರಸಾದಕ್ಕಾಗಿ ತಾಳ್ಮೆಯಿಂದ ತಪಿಸಬೇಕು.
- ವಿರಹದ ಕಾವಿನಲ್ಲಿ ಪುಟಗೊಳ್ಳುವ ಸ್ನೇಹವೇ ಶುದ್ಧವಾದುದು.
- ಸ್ನೇಹ ಯಾವುದು ಎಂದರೆ, ವಿರಹದಲ್ಲಿ ಅದು ಅತಿಶಯವಾಗಿ, ಸಂಗಮದಲ್ಲಿ ಕೂಡಿದಾಗ ಅದು ಪ್ರೇಮರಾಶಿಯಾಗಿ ಬರುತ್ತದೆ!
- ಪ್ರೀತಿ ಶರಣುಹೋಗುವ ರೀತಿ.
- ಉತ್ತಮ ಪದಾರ್ಥಕ್ಕೆ ರಕ್ಷಣೆಬೇಕು. ಭಕ್ತಿ ಗುಪ್ತವಾಗಿರಬೇಕು.
- ನನ್ನ 'ಅರಳು-ಮರಳು' ಎಂದರೆ ಮರಳಿ ಅರಳುವುದು, ೬೦ನೇ ವರ್ಷಕ್ಕೆ ಮರಳಿ ಅರಳುತ್ತಾ ಇದೆ ಎಂಬ ಅರ್ಥಕೊಡುವ ಮಾತು.
- ಮೌನ ಮಾತಿನ ತಾಯಿ ಮಡಿಲು.
- ಒಳ್ಳೆಯದು ಯಾತರಿಂದ ಆಗುತ್ತದೆ ಎಂದರೆ ಸೌಮನಸ್ಯದಿಂದ ಆಗುತ್ತದೆ.
- ತಾಪ ಸಹಿಸಿಕೊಂಡರೆ ತಪವಾಗುತ್ತದೆ. ತಪಿಸಿದುದಕ್ಕೆ ಸುಗಂಧ ಬರುತ್ತದೆ.
- ಒಳ್ಳೆಯ ಮಾತುಗಳನ್ನಾಡುವುದೇ ಒಂದು ಸುಖ.
- ಬಡಿಸು = ವರ್ಧಿಸು. ಅನ್ನ ವರ್ಧಿಸಬೇಕು, ಬೆಳೆಸಬೇಕು, ಖರ್ಚು ಮಾಡುವುದಲ್ಲ. ಅದು ಅಮೃತ-ಖರ್ಚಾಗುವುದಿಲ್ಲ!

# ವಿಚಾರ ಮಂಜರಿ

- ನಾಡುದೇಹ, ನುಡಿನಾಲಿಗೆ ವಾಙ್ಮಯೋಪಾಸನೆಯ ಸಂಸ್ಕಾರವನ್ನು ತಪ್ಪಿಸಿಕೊಂಡವರು ನೆಲೆಯಿಲ್ಲದ ಹುಚ್ಚರು.
- ದಾಸ ಕೂಟಗಳಾಗಬೇಕು – ಕೇವಲ ವೈಷ್ಣವರವಲ್ಲ, ಅನುಭವ ಮಂಟಪಗಳಾಗಬೇಕು – ಕೇವಲ ವೀರಶೈವರವಲ್ಲ.
- ಭಿನ್ನಮತಗಳ ಹಿಂದೆ ಒಂದೇ ಒಂದು ಬುದ್ಧಿಯನ್ನು ಕಂಡುಹಿಡಿಯುವದೇ ಜ್ಞಾನ.
- ಕನ್ನಡ ಮಾತಿನಿಂದಲೇ ಕನ್ನಡಿಗನೆಂಬ ಮಾತು. ಕನ್ನಡವು ಹೆಚ್ಚಾದಂತೆ ಕನ್ನಡಿಗನಿಗೆ ಭೂಷಣ. ಕನ್ನಡಿಗನು ಹೆಚ್ಚಿನವನಾದಂತೆ ಕನ್ನಡಕ್ಕೆ ಗೌರವ. ಹೆಚ್ಚಿನ ಕನ್ನಡಿಗರ ಗೌರವದ ಕನ್ನಡದಿಂದ ನಿನದಿಸುವ ಕರ್ನಾಟಕವು ಧನ್ಯಭೂಮಿ! ಇಲ್ಲದಿದ್ದರೇನು ? ಕನ್ನಡನಾಡು–ನೆಲ, ಮಣ್ಣು ! ಕನ್ನಡಿಗ–ಪಶು ಪ್ರಾಣಿ! ಕನ್ನಡಶಬ್ದ–ಗಾಳಿ !
- ಕನ್ನಡಿಗರೆಂಬ ವ್ಯಕ್ತಿ ಪುರುಷರಲ್ಲಿ, ಕನ್ನಡಿಗನೆಂಬ ಸಮಷ್ಟಿಪುರುಷನೊಬ್ಬನು ಇರುತ್ತಿರಲಿಕ್ಕೆ ಬೇಕು. ಕರ್ನಾಟಕವೇ ಅವನ ದೇಹ, ಇಂದಿನವರೆಗಿನ ಇತಿಹಾಸವೇ ಅವನ ಚರಿತ್ರೆ, ಇಲ್ಲಿಯ ಜನರೇ ಅವನ ಪ್ರಾಣಶಕ್ತಿ, ಇಲ್ಲಿ ಮತ ಸಮೂಹವೇ ಅವನ ಸಾಧನ ಪ್ರಪಂಚ, ಇಲ್ಲಿಯ ವಾಙ್ಮಯವೇ ಅವನಬುದ್ಧಿ–ಅಂತಃಕರಣಗಳ ನಿದರ್ಶಕ, ಇಲ್ಲಿಯ ಗುಡಿಗೋಪುರ ಮಹಾಲು ಮಂದಿರ ಕೆರೆ ಕಟ್ಟೆಗಳೇ ಅವನ ಕರ್ಮಕೌಶಲದ ಪ್ರದರ್ಶಕ.
- ತ್ಯಾಗಭೋಗವು ಕನ್ನಡ ಸಂಸ್ಕೃತಿಯ ನೈಸರ್ಗಿಕವಾದ ಶ್ವಾಸೋಚ್ಛ್ವಾಸವಾಗಿದೆ.
- ಒಳ್ಳೆಯ ಮನಸ್ಸಿನಿಂದ ಹೊಂದಿಕೊಂಡಿರುವದೇ ಧರ್ಮ.
- ವೈಮನಸ್ಸಿನಿಂದ ಬೇರೆಬೇರೆಯಾಗಿರುವುದೇ ಅಧರ್ಮ.
- ಧರ್ಮವು ಅನುಭಾವದ ಮಾತು, ಮತವು ಬುದ್ಧಿಯದು.
- ಮತವು ಸಾಧನೆ ; ಧರ್ಮವು ಸಿದ್ಧಿ.

- ಮತವು ಪ್ರಕೃತಿ ; ಧರ್ಮವು ಸಂಸ್ಕೃತಿ.
- ಅನ್ನ ಮತ್ತು ಹಸಿವುಗಳ ತೊಡಕನ್ನು ತೊಡಕಿಲ್ಲದೆ ಬಿಡಿಸುವ ಪ್ರಯೋಗಕ್ಕೆ ಧರ್ಮ ಎಂದು ಹೆಸರು. ಅನ್ನಪೂರ್ಣೆಯನ್ನು ಸ್ವತಂತ್ರ ಮಾಡುವವರೆಗೆ ಧರ್ಮವು ಅತಂತ್ರವಾಗಿರತಕ್ಕದ್ದು ಎಂದು ತಿಳಿದುಕೊಳ್ಳಬೇಕು.
- ಅನಿರ್ಬಂಧನೂ, ನಿರ್ಭಯನೂ ಆದ ಜ್ಞಾನಿಯೇ ನಿಜವಾದ ಧಾರ್ಮಿಕನು.
- ವಿಚಾರವನ್ನು ಆನಂದ ಭೂಮಿಕೆಯ ಮೇಲಿಂದ ನೋಡಬೇಕು.
- ಅನುಭವವು ಜಗತ್ತಿನ ಕಾರಣವನ್ನು ಹುಡುಕುತ್ತದೆ; ಅನುಭಾವವು ಜಗತ್ತಿನ ಕರ್ತೃವನ್ನೆ ಹುಡುಕುತ್ತದೆ.
- ಪ್ರೀತಿಯಿಲ್ಲದುದು ಬಳಗವಲ್ಲ. ಬಿಡಿತನದ ಬಿಕ್ಕಟ್ಟಿನಲ್ಲಿ ಇಡಿತನದ ಒಕ್ಕಟ್ಟು, ಹುಟ್ಟಿಸುವ ಹುಟ್ಟೇ ಬಳಗ. ಪ್ರೀತಿಯ ಬೆಳವಲನಾಡು ಆಗಬೇಕು ಇಳೆ. ಇದಕ್ಕಾಗಿ ಬಳಗ ಸಾಧನ.
- ಕಟ್ಟಲಾರದವನು ಕೆಡಿಸಬಾರದು.

# ಗಾರುಡಿಗ ಬೇಂದ್ರೆ

ಬೇಂದ್ರೆಯವರ ಮತ್ತು ಅವರ ಕಾವ್ಯದ ಶಕ್ತಿ, ಶಾಂತಿ, ಓಜಸ್ಸನ್ನು ಕಂಡು ಮರುಳಾದ ಮಾಸ್ತಿಯವರು, ಅವರನ್ನು ಗಾರುಡಿಗ ಎಂದು ಕರೆದರು. ಬೇಂದ್ರೆ ಕನ್ನಡ ನವೋದಯ ಸಾಹಿತ್ಯದ ಗಾರುಡಿಗರಾಗಿ ಕಾವ್ಯ ಮೋಡಿಮಾಡಿದರು. ಒಲವು, ಬದುಕು, ಆನಂದ, ಶಾಂತಿ, ಆಹ್ಲಾದವನ್ನು ಈ ನೆಲದ ಜನರ ಸೊಗಡಿನ ಭಾಷೆಯಲ್ಲಿ ನುಡಿದು, ಕುಣಿದು, ಜನಕ್ಕೆ ಹಿಗ್ಗಿನ ಹಾಡಿನ ಗುಂಗನ್ನು ಹಿಡಿಸಿದರು. 'ಹುಸಿನಗುತ ಬಂದೇವ ನಸುನಗುತ ಬಾಳೋಣ ! ತುಸುನಗುತ ತೆರಳೋಣ !' ಎಂದು ನಸುನಗುತ ಹಾಡುಕಟ್ಟಿ ಬಾಳಿದರು. 'ಸಾಧನಾಗೀತಕ್ಕೆ ಸುಸಮಾನ ಯಾವುದು ! ಸಹಜಕ್ಕೆ ಬೇಕಿಲ್ಲ ಹುಸಿಧ್ಯಾನಾ' ಎಂದು ಕೃತ್ರಿಮತೆಯಿಲ್ಲದ ಸಹಜ ಧಾರವಾಡದವನಾಗಿ ಗ್ರಾಮ್ಯ ಪದಪ್ರಯೋಗದ ನಿಸರ್ಗಸಹಜ ರಸಿಕನಾಗಿ ಬದುಕಿ ಕಾವ್ಯಸಾಧನೆ ಮಾಡಿ ಕಾವ್ಯರ್ಷಿಯಾದರು. "ಬೆಳಕೆ ಬೆಳಕಿದ್ದು ಕತ್ತಲೆಯು ತುಂಬಿತು ಹೇಗೆ?" ಎಂಬ ಹಿರಿದಾದ ಪ್ರಶ್ನೆಯನ್ನು ಬಾಲ್ಯ ಸಹಜ ಕುತೂಹಲದಿಂದ ತಾಯಿಯನ್ನು ಕೇಳುತ್ತ ಬೆಳೆದ ಬೇಂದ್ರೆ ; ಗೂಡಿನಲ್ಲಿರುವ, ಬಾಳಿನಲ್ಲಿರುವ, ಕತ್ತಲೆಗೆ ಬೆಳಕಿಂಡಿ ತಂದರು. ಕಾವ್ಯದ ಬೆಳಕಲ್ಲಿ ಬದುಕನ್ನು ದರ್ಶಿಸಿ ವರಕವಿಯಾದರು. 'ದೇಹ ಎಂಬುದು ಒಂದು ತೊಗಲಚೀಲ. ಈ ಚೀಲವನ್ನು ಅನ್ನದಿಂದ ತುಂಬುವುದಕ್ಕಿಂತ ಹಿಗ್ಗಿನಿಂದ ತುಂಬುವುದು ಮೇಲು. ಇದಕ್ಕೆ ಸಾಧನೆಬೇಕು' ಎಂಬ ಭಾವದಿಂದ 'ಮಣ್ಣಿನಲಿ ಅನ್ನವನು ಹುಡುಕುತಿವೆ ಕಣ್ಣುಗಳು : ಇನ್ನುವೂ ಹೂತಿಲ್ಲ ಮನದ ಮೊಗ್ಗು' ಎಂದು ಮಾನವ ಮನದ ಮೊಗ್ಗು ಅರಳಲು ಕಾವ್ಯರಚಿಸಿದರು. ಅವರ ಅನುಭವ ಚಿತ್‌ಶಕ್ತಿಯಿಂದ ಶಬ್ದರೂಪದಲ್ಲಿ ಆಕಾರಗೊಂಡು ಕಾವ್ಯಧರ್ಮದ ನಿಜನೆಲೆಯಲ್ಲಿ ಕನ್ನಡ ಕಾವ್ಯಶೈಲಿಯನ್ನು ರೂಪಿಸಿತು.

**ಭಾವಗೀತೆ :** ಗೀತೆಯೆಂದರೆ ಭಾವ. ಆ ಭಾವ ಬೇಂದ್ರೆಯವರ ರಸಸಂಗಾತಿಯಾಗಿ ಸಾಫಲ್ಯ ಪಡೆದು ಭಾವಗೀತೆಯಾಗಿ ಮಹಾಕಾವ್ಯದ ಮಹತ್ತು ಪಡೆಯಿತು. ಅವರ ಕಾವ್ಯ ನಾದಮಯವಾಗಿ, ನಾದದಿಂದ ಅರ್ಥವನ್ನು ಬೇರೆ ಮಾಡಲಾಗದ ರೀತಿ ಹರಿಯಿತು. ಅದರ ಜೊತೆಗೆ ಸ್ಫೂರ್ತಿಯ ಸಹಜ ಪ್ರಾಸದಿಂದ, ಲಯದ ಕುಣಿತದಿಂದ ಸಹೃದಯರ ಮನವನ್ನು ಸೂರೆಗೊಂಡಿತು. ಅವರ ದೈವದತ್ತ ಕವಿತ್ವ ಈ ಕನ್ನಡನೆಲಕ್ಕೆ, ಕನ್ನಡ ಕುಲಕ್ಕೆ ಶ್ರೇಯಸ್ಸನ್ನು ತಂದಿತು.

**Poet is a prophet** : ಬೇಂದ್ರೆಯವರು ಜನರ ಕವಿ. ಜನ ಕರೆದ ಊರಿಗೆ ಹೋಗಿ, ಕಾವ್ಯಗಂಗೆಯನ್ನು ಹರಿಸಿದರು. ಅವರು ಕಾವ್ಯಗಂಗೆಯನ್ನು ಕನ್ನಡಕ್ಕೆ ತಂದಂತೆ, ನಿಜಗಂಗೆಯುನ್ನು ತಮ್ಮ ಕಾವ್ಯಶಕ್ತಿಯಿಂದ ತಂದ ಉದಾಹರಣೆಯೊಂದಿದೆ. ಶ್ರೀ ನಾರಾಯಣ ಧೂಳಖೇಡ ಅವರು ವಿದ್ಯಾರ್ಥಿಯಾಗಿದ್ದ ಕಾಲೇಜಿನ, ಸಾಂಸ್ಕೃತಿಕ ಸಂಘದ ಕಾರ್ಯಕ್ರಮಕ್ಕೆ, ಮುಖ್ಯ ಅತಿಥಿಗಳಾಗಿ ಹೋಗಿದ್ದ ಬೇಂದ್ರೆಯವರು, prophet ಆದ ಘಟನೆ ರೋಮಾಂಚನವನ್ನುಂಟುಮಾಡುತ್ತದೆ. ಆ ಊರಿನಲ್ಲಿ ಬೇಂದ್ರೆಯವರು 'ಗಂಗಾವತರಣ'ವನ್ನು ವಾಚಿಸುತ್ತಾ,

"ಇಳಿದು ಬಾ ತಾಯಿ ಇಳಿದು ಬಾ
ಹರನ ಜಡೆಯಿಂದ
ಹರಿಯ ಅಡಿಯಿಂದ
ಋಷಿಯ ತೊಡೆಯಿಂದ ನುಸುಳಿ ಬಾ" ಎಂದು ನುಡಿದರು.

ಅನಂತರ "ಈ ಊರ ಹೊಲದಲ್ಲಿ ಇಳಿದು ಬಾ" ಎಂದು ಹೊಸ ಪದ ರಚಿಸಿ, ಗಂಗೆಯನ್ನು ಕರೆದಾಗ, ಮಳೆರಾಯ ಗುಡುಗಿ, ಆಗಸದಲ್ಲಿ ಮಿಂಚು ಸಂಚರಿಸಿ ಧಾರಾಕಾರ ಮಳೆ ಬಿತ್ತಂತೆ !

**ವಯೋವೃದ್ಧರಿಗೆ ಹೂಮಾಲೆ :** ಬಿ.ಆರ್. ನಾಡಗೌಡ ಅವರು 'ಶ್ರೀ ಬೇಂದ್ರೆಯವರ ಜೊತೆ ಎರಡು ದಿನ' ಎಂಬ ಲೇಖನದಲ್ಲಿ ಸಿಂಧಗಿಯಲ್ಲಿನ ಸಮಾರಂಭದಲ್ಲಿ "ಪೂಮಾಲೆ ಅರ್ಪಿಸಲು ಸಾಹಿತ್ಯ ಪ್ರೇಮಿ,

ವಯೋವೃದ್ಧರೊಬ್ಬರು ಮುಂದೆಬಂದಾಗ ಬೇಂದ್ರೆಯವರು ಅವರ ಕೈಯಿಂದ ಪೂಮಾಲೆಯನ್ನು ತೆಗೆದುಕೊಂಡು ಅವರಿಗೇ ಅರ್ಪಿಸಿ ಕೈಮುಗಿದ ಸನ್ನಿವೇಶ ಪ್ರತಿಯೊಬ್ಬರನ್ನು ಪುಲಕಿತರನ್ನಾಗಿ ಮಾಡಿತು"[೩೦] ಎಂದು ಬೇಂದ್ರೆತನವನ್ನು ತಿಳಿಸಿದ್ದಾರೆ.

**ಹಾರೋಗೇರಿ ನೆನೆದು :** ಬೇಂದ್ರೆಯವರ ಕವಿತಾವಾಚನ ರೀತಿಗಳನ್ನು 'ಸ್ಪೆಶಲ್ ಬೇಂದ್ರೆ ಬ್ರ್ಯಾಂಡ್' ಎಂದು ಕರೆದಿರುವ ದು.ನಿಂ.ಬೆಳಗಲಿ ಅವರು "ಬೇಂದ್ರೆಯವರ ಜತೆ ಚರ್ಚಿಸುವುದೆಂದರೆ, ನವರಸಪೂರ್ಣವಾದ ಒಂದು ಸಜೀವ ವಿಶ್ವಕೋಶದ ಜತೆ ಮಾತನಾಡುತ್ತಿದ್ದಂತೆ ಒಂದು ದಿವ್ಯ ಅನುಭವ"[೩೧] ಎಂದು ನುಡಿದಿದ್ದಾರೆ. ಅವರು ಬೇಂದ್ರೆಯವರನ್ನು ತಮ್ಮ ಊರು ಬನಹಟ್ಟಿಗೆ ಬರಬೇಕೆಂದು ಪತ್ರಬರೆದಾಗ, ಅದಕ್ಕೆ ಮಾರುತ್ತರ ಬರೆದು, ಅಲ್ಲಿಗೆ ಹೋದ ಬೇಂದ್ರೆಯವರ ಸರಳ ಸಜ್ಜನಿಕೆಯನ್ನು ನೆನೆದಿದ್ದಾರೆ. ಜೊತೆಗೆ ಅವರ ಊರಿನ ಕಾರ್ಯಕ್ರಮ ಮುಗಿದನಂತರ ಸಮೀಪದ ಹಾರೋಗೇರಿ ನೆನೆದು ; "ಹಾರೋಗೇರಿ ಹೈಸ್ಕೂಲಿನವರು ಹಿಂದೆ ಕರೆದಾಗ ಅಲ್ಲಿಗೆ ಹೋಗಲಿಕ್ಕೆ ಯಾವುದೋ ಕಾರ್ಯನಿಮಿತ್ತ ಆಗಿರಲಿಲ್ಲ ; ಈಗ ಹೋಗೋಣ" ಎಂದು ಹೊರಟು ಅಲ್ಲಿನ ಶಿಕ್ಷಕವರ್ಗಕ್ಕೆ ಅಚ್ಚರಿ ಉಂಟುಮಾಡಿದರಂತೆ !

**ಮಗನ ಕಂಕುಳಲ್ಲಿ ಕುಳಿತು ಬಂದೆ :** ಬೇಂದ್ರೆಯವರ ವಿನೋದಪ್ರಜ್ಞೆಯನ್ನು ತಿಳಿಯಲು ಶ್ರೀಮತಿ ಶಕುಂತಲಾನಾಯಿಕ ಅವರ ಸಂಭಾಷಣೆ ಕೇಳಬೇಕು. ಒಂದು ಸಮಾರಂಭದಲ್ಲಿ ಭೇಟಿಯಾದ ಬೇಂದ್ರೆಯವರನ್ನು ಆಕೆ "ಇಷ್ಟು ದೂರ ನಡೆದು ಬಂದಿರಾ ಅಣ್ಣಾ" ಎಂದು ಕೇಳಲು, ಬೇಂದ್ರೆಯವರು "ಈಗ ನಡೆಯುವುದನ್ನು ಬಿಟ್ಟಿದ್ದೇನೆ. ಇಷ್ಟು ದೂರ ನಾನು ನಡೆಯಲಾರೆ. ಮಗನ ಕಂಕುಳದಲ್ಲಿ ಕುಳಿತು ಬಂದೆ" ಎಂದು ನುಡಿದರು. ಆ ಮಾತಿನ ರಹಸ್ಯವನ್ನು ಥಟ್ಟನೆ ತಿಳಿಯಲಾರದೆ ಆಶ್ಚರ್ಯದಿಂದ ಅವರನ್ನೇ ನೋಡುತ್ತಿದ್ದ ಆಕೆಗೆ, ಬೇಂದ್ರೆಯವರು "ಚಿಕ್ಕಂದಿನಲ್ಲಿ ನಾನು ಮಗನನ್ನು ಎತ್ತಿಕೊಂಡು ಓಡಾಡುತ್ತಿದ್ದೆ. ಈಗ ಮಗ ನನ್ನನ್ನು ಸ್ಕೂಟರ್ ಮೇಲೆ ಕೂಡಿಸಿಕೊಂಡು ಓಡಾಡುತ್ತಾನೆ"[೩೨] ಎಂದು ರಹಸ್ಯೋದ್ಘಾಟನೆ ಮಾಡಿದರು.

**ಜನಪದ ವಾದ್ಯಗಳಲ್ಲಿ ಬೇಂದ್ರೆ ಕಾವ್ಯ :** ಬದುಕು ಭಾಷೆಯಾಗಿ ಜೀವ ಸ್ಪಂದನವಾಗಿ ರೂಪುಗೊಂಡ ಬನಿಯನ್ನು ಅರಿತ ಬೇಂದ್ರೆಯವರು, ಜನಪದೀಯ ವಾದ್ಯ ಪರಿಕರಗಳ ಲಯಕ್ಕೆ ಹೊಂದುವಂತಹ ಕಾವ್ಯವನ್ನೂ ರಚಿಸಿದ್ದಾರೆ. ಅವರ ಭಾವಗೀತೆಗಳನ್ನು ಕೋಲಾಟ, ಏಕತಾರಿ, ಕಂಸಾಳೆ, ಚೌಡಿಕೆಗಳೊಡನೆ ಹಾಗೂ ಇನ್ನಿತರ ಚರ್ಮ ವಾದ್ಯಗಳೊಡನೆ ಹಾಡಬಹುದಾಗಿದೆ.

**ಕೋಲಾಟ :** ಕೋಲಾಟ ಸಹಜ ಕುಣಿತದೊಡನೆ, ಕೋಲಬಡಿತದ ಮೈಮನದ ಆನಂದದ ಆಟ. ಆ ಕೋಲಾಟದಲ್ಲಿ ಬೇಂದ್ರೆಯವರ ಈ ಕವನಗಳನ್ನು ಹಾಡಬಹುದು:

ಜೀವನ ಒಂದು ನಾಟಕ
ಹೂವು ಹಣ್ಣಿನ ಕೂಟಕ ॥ಪ॥

ಮಲ್ಲಿಗಿ, ಮಲ್ಲಿಗಿ, ಅಲ್ಲಿಗಿ, ಇಲ್ಲಿಗಿ,
ಎಲ್ಲಾನು ಮಲ್ಲಿಗಿ ನೋಡಣ್ಣಾ ॥

ಮಾವು ಮಾವು ನಾವು ನೀವು
ಎತ್ತಾನು ಮಾವು ನೋಡಕ್ಕ ॥ಅನುಪಲ್ಲ॥
('ಜೀವನಕಲ್ಯಾಣ': ಅರಳು ಮರಳು)

ಕುಣಿಯೋಣು ಬಾರಃ
ಕುಣಿಯೋಣು ಬಾ ॥ಪಲ್ಲ॥
ತಾಳ್ಯಾಕ
ತಂತ್ಯಾಕ
ರಾಗದ ಚಿಂತ್ಯಾಕ
ಹೆಜ್ಜ್ಯಾಕ ಗೆಜ್ಜ್ಯಾಕ । ಕುಣಿ

ಕುಲುಕಿಸಿ ಕೈ ಕೈ
ಮಲಕಿಸಿ ಮೈ ಮೈ
ಥಕಥಕ ಥೈ ಥೈ । ಕುಣಿ

ಬೇಂದ್ರೆಯವರ 'ಸಖೀಗೀತ'ದ ಭಾಗಗಳನ್ನು ಆಯ್ದುಕೊಂಡು 'ನನಗೂ ನಿನಗೂ ಅಂಟಿದ ನಂಟಿನ । ಕೊನೆ ಬಲ್ಲವರಾರು ಕಾಮಾಕ್ಷಿಯೇ!' ಎಂಬುದನ್ನು ಪಲ್ಲವಿಯಾಗಿಟ್ಟುಕೊಂಡು ಕೋಲುಹಾಕಿ ಕುಣಿಯಬಹುದು.

**ಏಕತಾರಿ :** ಬೇಂದ್ರೆಯವರ ಆಧ್ಯಾತ್ಮಗೀತೆಗಳನ್ನು ಏಕತಾರಿಯಲ್ಲಾಗಲಿ ಚೌಡಿಕೆಯಲ್ಲಾಗಲಿ, ಹಾಡಿದರೆ; ಏಕತಾರಿ, ಚೌಡಿಕೆಯ ಮಿಡಿತ ಬೇಂದ್ರೆಯವರ ಕಾವ್ಯನಾದದ ಮಿಡಿತದೊಡನೆ ಆಧ್ಯಾತ್ಮಚಿಂತನೆಯ ಸನಿಸನಿಹ ಕೊಂಡೊಯ್ಯಬಹುದಾದ ಭಾವವನ್ನು ತರುತ್ತದೆ. ಆ ವಾದ್ಯಗಳಲ್ಲಿ ಈ ಕವನಗಳನ್ನು ಪ್ರಯೋಗಿಸಿ ಹಾಡಬಹುದು:

ಸಚ್ಚಿದಾನಂದ, ಸಚ್ಚಿದಾನಂದ, ಸಚ್ಚಿದಾನಂದ, ಸಚ್ಚಿದಾನಂದೋಂ
ಸಚ್ಚಿದಾನಂದ ॥ಪಲ್ಲ॥

ಸತಿ : ಬಾ, ಹಾಕುರಿಂಗಣಾ ಗಗನದಂಗಣಽದಾಽಗ
ನನ್ನ ಕಾಲಾಗ ॥
ಒಳಗೊಳಗ ಕುದಿವ ಭೂಕಂಪ
ಹೊರಗ ಹಸಿತಂಪ
ಮೇಲೆ ನರುಗಂಪೋ । ಮೇಲೆ ನರುಗುಂಪು ........
(ಸಚ್ಚಿದಾನಂದ : ನಾದಲೀಲೆ)

ಸ್ಪಂದಽ ಬಂಧಾ ಸ್ವಚ್ಛಂದಾ
ಸ್ವೈರಾಽ ನಿರ್ವೈರಾಽ ಸಹಜಽ ಅಂದಾಽ
ಆಡಲೂ ಬರದಾಽ ಸುಮ್ಮನಿರದಾಽ
ಕಾದುಽ ಕಾದುಽ ನಾದಾಽ
('ಸಪ್ತಕಲಾ': ಅರಳುಮರುಳು)

ಭಕ್ತನಲ್ಲರಾಗಿಽ । ವಿರಾಗಿಽ
ಭಗವಂತ ಭೋಗಿ
ಆ ಹೋಹೋ । ಮಹಾವಿಶ್ವಯೋಗಿಽ ।
(ಭಕ್ತನಲ್ಲರಾಗಿಽ ವಿರಾಗಿಽ : ಅರಳುಮರುಳು)

**ಕಂಸಾಳೆ :** ಕಂಸಾಳೆಯು ಹಾಡು ಮತ್ತು ಮಾತಿನ ವೈವಿಧ್ಯಪೂರ್ಣಹಾಡು ಗಬ್ಬ. ಹಾಡು ಸಂಗೀತಮಯವಾಗಿ ಕಾವ್ಯಗುಣದಿಂದ ಪಂಡಿತರನ್ನು ಮೆಚ್ಚಿಸಿದರೆ, ಗದ್ಯವು ಮಾತಿನ ಸರಳರೀತಿಯಿಂದ ಸಾಮಾನ್ಯ ಜನರನ್ನು ಆಕರ್ಷಿಸುತ್ತದೆ. ಪಂಡಿತರು ಸಾಮಾನ್ಯ ಜ್ಞಾನ ಪಡೆಯಲು ಹಾಗೂ ಜನಸಾಮಾನ್ಯರು ಪಾಂಡಿತ್ಯದಸವಿ ಸವಿಯಲು ಕಂಸಾಳೆ ಪೂರಕವಾಗಿದೆ. ಬೇಂದ್ರೆಯವರ 'ಬಂತಣ್ಣ ಸಣ್ಣ ಸೋಮವಾರ'ವನ್ನು ಎರಡು ತಾಳದಲ್ಲಿಯೂ, 'ಚಿಗರಿ ಗಂಗಳ ಚೆಲುವಿ' ಮತ್ತು 'ಯಾವೂರಾಕಿ ನೀ ಮಾಯಾಕಾರತಿ' ಯನ್ನು ಮೂರು ತಾಳದಲ್ಲಿಯೂ ಕಂಸಾಳೆಯಲ್ಲಿ ಪ್ರಯೋಗ ಮಾಡಬಹುದು. ಮಾತಿನ ಧಾಟಿಯ ಸಾಲುಗಳನ್ನು ಮಾತಾಗಿ ಬಳಸಬಹುದು.*

ತಮಟೆ : 'ದೇಮವ್ವನ ಮೆರವಣಿಗೆ' ಎಂಬ ಹಾಡನ್ನು ತಮಟೆಯೇ ಆದಿಯಾಗಿ ಹಲವು ಚರ್ಮವಾದ್ಯದ ಬಡಿತದ ನಡುವೆ ಹಾಡಬಹುದು.

ಸಂತೆಯ ಗದ್ದಲದಲ್ಲಿಯೆ ಸದ್ದಿಲ್ಲ
    ದುಂದುಮ್ಮಿ ನಿನ್ನ ನಗಾರಿ ॥ಪಲ್ಲ॥
ಭರತಿ ಮಧ್ಯಾಹ್ನದ ಬಿಸಿಲಲ್ಲಿ ಮೆರೆವುದು
    ಓ ತಾಯಿ ನಿನ್ನ ಸವಾರಿ ॥ಅನು॥

ಹೀಗೆ ಬೇಂದ್ರೆಯವರು ಹಲವಾರು ಜಾನಪದವಾದ್ಯಗಳೊಂದಿಗೆ ಹಾಡಬಹುದಾದ ಭಾವ, ಲಯ, ಛಂದೋಬಂಧ ಹೊಂದಿದ ಜಾನಪದ ಜಾಯಮಾನದ ಕವನಗಳನ್ನು ರಚಿಸಿದ್ದಾರೆ. ಅವರ ಸಾಹಿತ್ಯರಾಶಿಯನ್ನು ಶೋಧಿಸಿದರೆ ಇನ್ನೂ ಇಂತಹ ಕೆಲವು ಉದಾಹರಣೆಗಳು ಲಭಿಸಬಹುದು. ಸೃಜಲಶೀಲ ಸಾಹಿತ್ಯವನ್ನು ಈ ರೀತಿಯ ಪ್ರಯೋಗಕ್ಕೊಳಪಡಿಸಿದಾಗ; ರಸಿಕನ

---

* **ಈ ಲೇಖಕನು 'ಕಂಸಾಳೆಯಲ್ಲಿ ಬೇಂದ್ರೆ ಕಾವ್ಯ : ಒಂದು ಪ್ರಯೋಗ'** ಎಂಬ ಹೆಸರಿನಲ್ಲಿ ಈ ಕಾರ್ಯ್ಕ್ರಮವನ್ನು ೩೦.೧.೧೯೯೬ರಂದು ಬೆಂಗಳೂರಿನ 'ಗೋಖಲೆ ಸಾರ್ವಜನಿಕ ಸಂಸ್ಥೆ'ಯಲ್ಲಿ ನಡೆದ, ಬೇಂದ್ರೆ ಶತಮಾನೋತ್ಸವದಂದು (ಅದು ರಾಜ್ಯದಲ್ಲಿಯೇ ಪ್ರಥಮವಾಗಿ ಪ್ರಾರಂಭವಾದ ಬೇಂದ್ರೆ ಶತಮಾನೋತ್ಸವ ಕಾರ್ಯಕ್ರಮ) ಮತ್ತು ೨೩.೮.೧೯೯೬ರಂದು ಮೈಸೂರಿನ 'ಧ್ವನ್ಯಾಲೋಕ'ದಲ್ಲಿ ಬೇಂದ್ರೆ ಶತಮಾನೋತ್ಸವದಂದು ನಿರ್ದೇಶಿಸಿ ನಡೆಸಿರುವನು.

ಕಿವಿಗೆ ಹೊಸಹಾಡು ಹಳೆಯ ವಾದ್ಯಗಳ ದನಿಯೊಂದಿಗೆ ಸೇರಿ, ರಸಾನಂದವನ್ನುಂಟುಮಾಡುತ್ತದೆ.

**ಇದು ಬರಿ ಬೆಳಗಲ್ಲೋ ಅಣ್ಣಾ :** ಬೇಂದ್ರೆಯವರ ಸಾಹಿತ್ಯ ಸೇವೆಗೆ ಕೀರೀಟ ಪ್ರಾಯವಾಗಿ ೧೯೭೪ರಲ್ಲಿ ಅವರ 'ನಾಕುತಂತಿ' ಕೃತಿಗೆ ಜ್ಞಾನಪೀಠ ಪ್ರಶಸ್ತಿ ದೊರಕಿತು. ಇದು ಕನ್ನಡಕ್ಕೆ ದೊರಕಿದ ಎರಡನೆಯ ಜ್ಞಾನಪೀಠ ಪ್ರಶಸ್ತಿ . ಇದಕ್ಕೆ ಮೊದಲು ಕುವೆಂಪು ಅವರ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯಕ್ಕೆ ಆ ಪ್ರಶಸ್ತಿ ದೊರಕಿತ್ತು. ಎರಡು ಮಹಾಚೇತನಗಳು ಕನ್ನಡಭಾಷೆಗೆ ಜೀವಕೊಟ್ಟು, ಭಾಷೆಯ ಸಾಧ್ಯತೆಯನ್ನು ತಮ್ಮ ಕಾವ್ಯದಲ್ಲಿ ಪ್ರದರ್ಶಿಸಿದವು. ವರಕವಿ ಬೇಂದ್ರೆಯವರು ಮಹಾಕವಿ ಕುವೆಂಪು ಅವರ 'ಶ್ರೀರಾಮಾಯಣದರ್ಶನಂ' ಕೃತಿಯನ್ನು ಓದಿ, 'ಕನ್ನಡ ಸಾಹಿತ್ಯದಲ್ಲಿ ನಾಲ್ಕು ನಾಯಕ ರತ್ನಗಳು' ಎಂಬ ವಿಮರ್ಶಾಕೃತಿಯಲ್ಲಿ ರಾವಣನ ಪಾತ್ರದ ಬಗ್ಗೆ 'ಲಂಕೇಶ್ವರ ರಾವಣ' ಎಂಬ ವಿಮರ್ಶೆಯನ್ನು ಬರೆದಿದ್ದಾರೆ. ರಾವಣನ ವಿಷಯ ಬರುವಾಗಿನ ಸಂಪುಟದಿಂದ ರಸವತ್ತಾದ ಭಾಗಗಳನ್ನು ಉದ್ಧರಿಸಿ ವಿಮರ್ಶಿಸಿದ್ದಾರೆ.

"ಕರ್ನಾಟಕಕ್ಕೆ ತೆಂಕಲಾಗಿ ಇರುವ ತಮಿಳುನಾಡಿನಲ್ಲಿ ರಾವಣನೆಂಬುದು ಕೆಲವರಿಗೆ ರಾಮನಿಗಿಂತ ಪ್ರಿಯವಾದ ನಾಮ ಎಂದು ಕೇಳಿದ್ದೇನೆ. ರಾಮನ ಹೆಚ್ಚಳ ಬ್ರಾಹ್ಮಣರ ಕಲ್ಪನೆ. ಅದು ಸರಿಯಾಗಿರಲಾರದು ಎಂಬ ಭಾವ ಅದು. ಕನ್ನಡನಾಡಿನಲ್ಲಿಯೂ, ಜೈನ, ವೀರಶೈವಗಳ ವಿಚಾರಪ್ರಭಾವಳಿಯಲ್ಲಿ ರಾವಣನ ಮೇಲ್ಮೆ ಒಮ್ಮೊಮ್ಮೆ ರಾಮನನ್ನು ತಿರಸ್ಕರಿಸುತ್ತದೆ. ಕುವೆಂಪು ಅವರ ರಾವಣ ಈ ಯಾವ ಜಾಡನ್ನೂ ಹಿಡಿಯುವುದಿಲ್ಲ. ರಾವಣನು ಸಣ್ಣ ತಪ್ಪಿಗಾಗಿ ದೊಡ್ಡ ಪ್ರಾಯಶ್ಚಿತ್ತವನ್ನು ಪಡೆದು, ಸರ್ವರ ಕರುಣೆಗೆ ಅಂತೆಯೆ ಅಭಿಮಾನಕ್ಕೆ ಪಾತ್ರನಾಗಬೇಕಾದ ನಾಯಕನಲ್ಲ. ಇಲ್ಲಿ ಯಾವ ದುರಂತವೂ ಕರುಣೆಗೆ ಶರಣು ಹೋಗಿಲ್ಲ. ರಾವಣನ ಅಹಂಕಾರವು ತನ್ನ ರೌದ್ರಪಾಕದಲ್ಲಿಯೇ ಕಾರುಣ್ಯ ಶರೀರ ಪಡೆದಿದೆ ಸ್ತ್ರೀಮೂರ್ತಿಯಲ್ಲಿ ಕಾಮುಕ ಪ್ರತಿಬಿಂಬ ಕಂಡು ಕಂಡು ಮರುಗಿ, ಮಾಗಿ ಮಾತೃಶ್ರೀತ್ವವನ್ನು ಕಾಣುವ ಹದಕ್ಕೆ ಬಂದಿದ್ದಾನೆ. ರಾಮನಲ್ಲಿ ವಿರೋಧ ಭಕ್ತಿ ಮಾಡಿ ಮಾಡಿ ವಿರೋಧವಳಿದು ಭಕ್ತಿಯೇ ಬೆಳೆದು ಸ್ವಂತ ವೀರ್ಯವು ರಾಮವೀರ್ಯದ ಬಿಂದುವಾಗಿ

ಪರಿಪಾಕಗೊಂಡಿದೆ."[೩೩] ಎಂದು ರಾವಣ ಹದಗೊಂಡ ಬಗೆಯನ್ನು ವಿಮರ್ಶಿಸಿದ್ದಾರೆ. ತಾವೇ ಮುಂದುವರಿದು "ಅಖಂಡಧ್ಯಾನ ಪರಿಪಾಕವು ಎಂಥ ಫಲಶ್ರೀಯನ್ನು ತರಬಲ್ಲದು ಎಂಬುದಕ್ಕೆ ಉದಾಹರಣೆ ಈ ಮಹಾಕಾವ್ಯ. ಕುವೆಂಪುವನ್ನೇ ವಿರಚಿಸಿತಂತೆ ಈ ಕಾವ್ಯತಪ"[೩೪] ಎಂದು ಕಾವ್ಯತಪದ ಫಲವನ್ನೂ ಹೇಳಿದ್ದಾರೆ; ಆ ಜಗದ ಕವಿಗೆ, ಯುಗದ ಕವಿಗೆ ಮಣಿದಿದ್ದಾರೆ:

ಯುಗದ ಕವಿಗೆ ಜಗದ ಕವಿಗೆ
ಶ್ರೀರಾಮಾಯಣ ದರ್ಶನದಿಂದಲೆ
ಕೈಮುಗಿದ ಕವಿಗೆ
ಮಣಿಯದವರು ಯಾರು?

ಹೀಗೆ ತನ್ನ ಸಮಕಾಲೀನ ಮಹಾಕವಿಯನ್ನು ಸ್ತುತಿಸಿ ಹಾಡಿದ ಹಿರಿಯ ಭಾವದ, ಜಗತ್ತಿನ ಏಳಿಗೆಯನ್ನು ಕಾಣಬಯಸಿದ ಬೇಂದ್ರೆಯವರು ೨೬.೧೦.೧೯೮೧ ರಂದು ದೀಪಾವಳಿ-ನರಕಚತುರ್ದಶಿಯ ಬೆಳಕಿನ ಹಬ್ಬದಂದು ಬೆಳಕಾಗಿ ಹೋದರು ; 'ಇದು ಬರಿ ಬೆಳಗಲ್ಲೋ ಅಣ್ಣಾ' ಎಂಬ ಬೆಳಕಿನ ಶಾಂತ ರಸವಾದರು.

ಬೇಂದ್ರೆಯವರು ಬೆಳಕಾದಾಗ ಕುವೆಂಪು ಅವರು ನೀಡಿದ ಶ್ರದ್ಧಾಂಜಲಿ ಮನನೀಯವಾಗಿದೆ : "ಕನ್ನಡದ ನವೋದಯದ ಅಗ್ರಗಣ್ಯ ಕವಿಗಳ ಪೈಕಿ ಬೇಂದ್ರೆ ಬಹಳ ಮುಖ್ಯರಾದವರು. ಜನತೆಯನ್ನು ಬಡಿದೆಬ್ಬಿಸಬಲ್ಲ ಕೀರ್ತಿಶಾಲಿ ಅವರಾಗಿದ್ದರು. ಅವರ ನಿಧನ ಲೌಕಿಕವಾಗಿ ದುಃಖ ತರುವುದಾದರೂ ಅವರು ಬದುಕನ್ನು ಸಂಪೂರ್ಣವಾಗಿ ಸಾರ್ಥಕವಾಗಿ ಜೀವಿಸಿದರು. ಅವರ ಸಾಹಿತ್ಯ ಆಚಂದ್ರಾರ್ಕವಾಗಿ ಬೆಳಗುವಂತೆ ಮಾಡುವುದು ನಮ್ಮೆಲ್ಲರ ಕರ್ತವ್ಯ. ಅವರ ಆತ್ಮಕ್ಕೆ ನಾನು ಶಾಂತಿಕೋರುತ್ತೇನೆ."[೩೫] "ಕವಿಗೆ ಕವಿ ಮಣಿವಂ" ಎಂಬುದು ಇದನ್ನೇ !

**ಅಂಬಿಕಾತನಯದತ್ತ ವೇದಿಕೆ :** ಬೇಂದ್ರೆ ಬೆಳಕಾದನಂತರ ಧಾರವಾಡದ 'ಅಂಬಿಕಾತನಯದತ್ತ ವೇದಿಕೆ' ಯವರು ಪರಾಕಿ, ಕಾವ್ಯ ವೈಖರಿ, ತಾಲೆಕ್ಕಣಿಕೆ ತಾದಾತ್ಮ್ಯ, ಬಾಲಬೋಧೆ, ಪ್ರತಿಬಿಂಬಗಳು ಎಂಬ ಅವರ ಅಪ್ರಕಟಿತ

ಕವನಸಂಕಲನಗಳನ್ನು ಪ್ರಕಟಿಸಿದ್ದಾರೆ. ಅಂತೆಯೇ ಬೇಂದ್ರೆಯವರ ಆಯ್ದಕವನಗಳ ಇಂಗ್ಲಿಷ್ ಅನುವಾದವನ್ನು 'ಸ್ಪ್ರಿಂಗ್ ಫಯರ್' ಎಂಬ ಹೆಸರಿನಲ್ಲಿ ಹೊರತಂದಿದ್ದಾರೆ. ಬೇಂದ್ರೆಯವರದೇ ಮರಾಠಿ ಕವಿತೆಗಳನ್ನು 'ಉಮಾಳ' ಎಂಬ ಹೆಸರಿನಲ್ಲಿ ಬೆಳಕಿಗೆ ತಂದಿದ್ದಾರೆ. ಇದು ಬೇಂದ್ರೆ ಶತಮಾನೋತ್ಸವ ವರ್ಷ. ನಾಡಿನಾದ್ಯಂತ ಬೇಂದ್ರೆ ಶತಾಬ್ಧಿ ಕಾರ್ಯಕ್ರಮಗಳು ನಡೆಯುತ್ತಿವೆ. ಸಾಧನಕೇರಿಯ ಕವಿನಿವಾಸದ ಮಗ್ಗುಲಲ್ಲಿ 'ಬೇಂದ್ರೆ ರಾಷ್ಟ್ರೀಯ ಸ್ಮಾರಕ'ವಾಗಿ ಬೃಹತ್ ಭವನವನ್ನು ಕರ್ನಾಟಕ ಸರ್ಕಾರದವರು ಕಟ್ಟುತ್ತಿದ್ದಾರೆ. ನಾವು ಕನ್ನಡಿಗರ ಮನಮನದಲ್ಲಿ ಬೇಂದ್ರೆ ಕಾವ್ಯದ ಗುಂಗುಹಿಡಿಸುವ ಕೆಲಸಮಾಡೋಣ. "ಅವರ ಸಾಹಿತ್ಯ ಆಚಂದ್ರಾರ್ಕವಾಗಿ ಬೆಳಗುವಂತೆ ಮಾಡುವುದು ನಮ್ಮೆಲ್ಲರ ಕರ್ತವ್ಯ" ಎಂಬ ಕುವೆಂಪುವಾಣಿಯಂತೆ ಬೇಂದ್ರೆ ಸಾಹಿತ್ಯದ ಅಧ್ಯಯನ ಮಾಡೋಣ, ಪ್ರಸಾರ ಮಾಡೋಣ.

* * *

## ಸಂಖ್ಯಾ ಟಿಪ್ಪಣಿಗಳು

೧. ಶಕುಂತಲಾನಾಯಿಕ, ಬೇಂದ್ರೆ ಅಣ್ಣಾ, 'ಬೇಂದ್ರೆ ಸ್ಮೃತಿ' (ಸಂ.) ಬೆಂಗಳೂರು. ೧೯೮೨, ಪು. ೩೧

೨. ದ.ರಾ. ಬೇಂದ್ರೆ, 'ಸಾಹಿತ್ಯದ ವಿರಾಟ್ ಸ್ವರೂಪ' ಧಾರವಾಡ, ೧೯೭೪, ಪು.೪೧

೩. ಅದೇ, ಪು. ೫೨

೪. ವಾಮನಬೇಂದ್ರೆ, 'ಬೇಂದ್ರೆ ಜೀವನಪರಿಚಯ', ಧಾರವಾಡ, ೧೯೯೦, ಪು. ೧೪, ೧೫

೫. ದ.ರಾ. ಬೇಂದ್ರೆ, 'ಸಾಹಿತ್ಯದ ವಿರಾಟ್ ಸ್ವರೂಪ', ಪೂರ್ವೋಕ್ತ, ಪು.೩೭

೬. ವಾಮನಬೇಂದ್ರೆ, 'ಬೇಂದ್ರೆ ಜೀವನ ಪರಿಚಯ', ಪೂರ್ವೋಕ್ತ, ಪು.೨೬

೭. ದ.ರಾ. ಬೇಂದ್ರೆ, 'ಕೃಷ್ಣಾಕುಮಾರಿ', ಪ್ರಸ್ತಾವನೆ, ಧಾರವಾಡ, ೧೯೯೦, ಪು.xx, xxi

೮. ದ.ರಾ. ಬೇಂದ್ರೆ, 'ಸಾಹಿತ್ಯದ ವಿರಾಟ್ ಸ್ವರೂಪ' ಪೂರ್ವೋಕ್ತ, ಪು.೫೦

೯. ಶ್ರೀನಿವಾಸ, 'ನಾದಲೀಲೆ', ಮುನ್ನುಡಿ, ಧಾರವಾಡ, ೧೯೮೯, ಪು. xx, xxi

೧೦. ಅದೇ, ಪು. xviii, xix

೧೧. ಪ್ರಭುಶಂಕರ, 'ಕನ್ನಡದಲ್ಲಿ ಭಾವಗೀತೆ' ಮೈಸೂರು, ೧೯೮೧ ಪು.೩೩೪
೧೨. ತೀ.ನಂ.ಶ್ರೀಕಂಠಯ್ಯ, 'ಸಮಾಲೋಕನ', ಮೈಸೂರು, ೧೯೫೮, ಪು. ೪೧
೧೩. ವಾಮನಬೇಂದ್ರೆಯವರು ಬರೆದ ಪತ್ರ, ತಾ. ೨೪.೧೧.೯೫
೧೪. ತೀ.ನಂ.ಶ್ರೀಕಂಠಯ್ಯ, 'ಭಾರತೀಯ ಕಾವ್ಯಮೀಮಾಂಸೆ', ಮೈಸೂರು, ೧೯೯೦, ಪು. ೨೯೭
೧೫. ದ.ರಾ. ಬೇಂದ್ರೆ, 'ಮೇಘದೂತ', ಪ್ರಥಮ ಮುದ್ರಣದ ಪ್ರಸ್ತಾವನೆ, ಧಾರವಾಡ, ೧೯೯೧, ಪು. ೨೦
೧೬. ದ.ರಾ. ಬೇಂದ್ರೆ, 'ಗೋಲ್', ಧಾರವಾಡ, ೧೯೯೫, ಪು.೩
೧೭. ದ.ರಾ. ಬೇಂದ್ರೆ, 'ಸಾಯೋಆಟ', ಧಾರವಾಡ, ೧೯೯೦, ಪು.೬
೧೮. ದ.ರಾ. ಬೇಂದ್ರೆ, 'ಸಾಹಿತ್ಯದ ವಿರಾಟ್ ಸ್ವರೂಪ', ಪೂರ್ವೋಕ್ತ, ಪು.೪೦೪
೧೯. ಅದೇ, ಪು. ೪೦೭, ೨೦. ಪು. ೪೦೮, ೨೧. ಪು. ೩೫೫, ೨೨. ಪು. ೩೫೬, ೨೩. ಪು. ೩೫೮, ೨೪. ಪು. ೩೬೨, ೨೫. ಪು. ೩೮೨, ೨೬. ಪು. ೩೮೩, ೨೭. ಪು. ೩೮೪, ೨೮. ಪು. ೬೩೧, ೨೯. ಪು. ೭೨೯
೩೦. ಬಿ.ಆರ್. ನಾಡಗೌಡ 'ಇಳಿದು ಬಾ ತಾಯಿ' (ಸಂ.) ಧಾರವಾಡ, ೧೯೭೭ ಪು. ೬೮೯, ೬೯೦.
೩೧. ದು.ನಿಂ. ಬೆಳಗಲಿ 'ಇಳಿದು ಬಾ ತಾಯಿ' ಪೂರ್ವೋಕ್ತ, ಪು. ೬೯೫
೩೨. ಶಕುಂತಲಾನಾಯಿಕ, ಬೇಂದ್ರೆ ಅಣ್ಣಾ, 'ಬೇಂದ್ರೆ ಸ್ಮೃತಿ' (ಸಂ.) ಪೂರ್ವೋಕ್ತ ಪು. ೩೨.
೩೩. ದ.ರಾ. ಬೇಂದ್ರೆ, ಪೂರ್ವೋಕ್ತ, 'ಕನ್ನಡ ಸಾಹಿತ್ಯದಲ್ಲಿ ನಾಲ್ಕು ನಾಯಕರತ್ನಗಳು' ಧಾರವಾಡ, ೧೯೬೮, ಪು. ೫೮.
೩೪. ಅದೇ, ಪು. ೫೯
೩೫. ಶ್ರೀ ಕುವೆಂಪು ಅವರ ಕಂಬನಿ, ಪೂರ್ವೋಕ್ತ, ಸ್ಮೃತಿ (ಸಂ.) ಪೂರ್ವೋಕ್ತ ಪು. ೪೨, ೪೩.

## ಹಾಡುಹಕ್ಕಿ ಅಂಬಿಕಾತನಯದತ್ತರ ಜೀವನದ ಪ್ರಮುಖ ಘಟ್ಟಗಳು

೩೧.೦೧.೧೮೯೬ ಧಾರವಾಡದಲ್ಲಿ ಜನನ, ಮಾಘವದ್ಯ, ಪ್ರತಿಪದೆ, ಗುರು ಪ್ರತಿಪದೆ, ಮನ್ಮಥನಾಮ ಸಂವತ್ಸರ.
೧೯೦೭ ತಂದೆ ರಾಮಚಂದ್ರ ಬೇಂದ್ರೆ ಅವರ ಮರಣ.

೧೯೧೩ ಮ್ಯಾಟ್ರಿಕ್ ಮುಗಿಸಿ ಪುಣೆ ಫರ್ಗ್ಯೂಸನ್ ಕಾಲೇಜಿಗೆ ಸೇರಿದ್ದು.

೧೯೧೬ ಪುಣೆ ಕರ್ನಾಟಕ ಸಂಘದಲ್ಲಿ ಪ್ರಥಮವಾಗಿ ಕವಿತಾವಾಚನ.

೧೯೧೮ ಬಿ.ಎ. ಪಾಸು, ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಶಿಕ್ಷಕ ವೃತ್ತಿ.

೧೯೧೯ ಲಕ್ಷ್ಮೀಬಾಯಿಯವರೊಡನೆ ವಿವಾಹ ; ಹುಬ್ಬಳ್ಳಿಯಲ್ಲಿ.

೧೯೨೨ ಮೊದಲ ಪುಸ್ತಕ 'ಕೃಷ್ಣಾಕುಮಾರಿ' ಪ್ರಕಟಣೆ.

೧೯೨೯ ಬೆಳಗಾವಿ ಸಾಹಿತ್ಯ ಸಮ್ಮೇಳನದಲ್ಲಿ 'ಹಕ್ಕಿ ಹಾರುತಿದೆ ನೋಡಿದಿರಾ' ಕವನವಾಚನ.

೧೯೩೦ ಗೆಳೆಯರ ಗುಂಪಿನ ಕವಿಗಳ ಕವನ ಸಂಕಲನ 'ಹಕ್ಕಿ ಹಾರುತಿದೆ' ಪ್ರಕಟನೆ, ಮೈಸೂರಿನ ಲೇಖಕರ ಗೋಷ್ಠಿಯ ಅಧ್ಯಕ್ಷತೆ.

೧೯೩೨ ಪ್ರಥಮ ಕವನ ಸಂಕಲನ 'ಗರಿ' ಪ್ರಕಟನೆ, 'ನರಬಲಿ' ಕವನದ ನಿಮಿತ್ತ ಜೇಲುವಾಸ.

೧೯೩೩ ಎಂ.ಎ. ಪಾಸು; ಮುಂಬೈ ಕವಿಸಮ್ಮೇಳನದ ಅಧ್ಯಕ್ಷತೆ.

೧೯೪೨ ಧಾರವಾಡದ ನ್ಯೂ ಇಂಗ್ಲಿಷ್ ಹೈಸ್ಕೂಲಿನಲ್ಲಿ ಶಿಕ್ಷಕನ ಕೆಲಸ.

೧೯೪೩ ಪುಣೆ ಕಾಮರ್ಸ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಕೆಲಸ; ಶ್ರೀ ಅರವಿಂದರ ದರ್ಶನ ಭಾಗ್ಯ.

೨೬.೧೨.೧೯೪೩ ಶಿವಮೊಗ್ಗದ ೨೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ.

೧೯೪೪ ಡಿ.ಎ.ವಿ. ಕಾಲೇಜು ಸೊಲ್ಲಾಪುರದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಕೆಲಸ.

೧೯೪೬ ಧಾರವಾಡದಲ್ಲಿ ೫೦ನೇ ಹಟ್ಟುಹಬ್ಬ, ೧೦ ಸಾವಿರ ನಿಧಿ ಅರ್ಪಣೆ.

೧೯೫೬ ಡಿ.ಎ.ವಿ. ಕಾಲೇಜು ಸೊಲ್ಲಾಪುರದ ಕನ್ನಡ ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತಿ ; ಆಕಾಶವಾಣಿ ಧಾರವಾಡ ಕೇಂದ್ರದ ಸಾಹಿತ್ಯ ಸಲಹೆಗಾರರಾಗಿ ಕೆಲಸ; ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ೬೦ನೇ ಹುಟ್ಟುಹಬ್ಬದ ಸನ್ಮಾನ.

೧೯೫೯ 'ಅರಳು–ಮರಳು' ಕವನ ಗುಚ್ಛಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ.

೧೯೬೨ ತುಮಕೂರಿನ ಪುರಸಭೆಯವರಿಂದ ಸನ್ಮಾನ.

೧೯೬೪ ಮೈಸೂರು ದಸರಾ ಉತ್ಸವ ಸಮಿತಿಯವರಿಂದ ಸನ್ಮಾನ.

| | |
|---|---|
| ೧೯೬೬ | 'ಸಂವಾದ' ಮರಾಠಿ ಗ್ರಂಥಕ್ಕೆ ಮಹಾರಾಷ್ಟ್ರದ ಕೇಳಕರರ ಪ್ರಶಸ್ತಿ; ಶಿರಹಟ್ಟಿಯಲ್ಲಿ ೭೦ನೇ ಹುಟ್ಟುಹಬ್ಬ ; ಕರ್ನಾಟಕ ಸರ್ಕಾರದಿಂದ ಆಜನ್ಮ ಗೌರವ ವಿಶ್ರಾಂತಿವೇತನ; ಮೈಸೂರು ವಿಶ್ವವಿದ್ಯಾಲಯ ದಿಂದ ಗೌರವ ಡಾಕ್ಟರೇಟ್, ಹೈದರಾಬಾದ್ ಹಿಂದಿ ಪ್ರಚಾರ ಸಭಾದವರಿಂದ 'ಸಾಹಿತ್ಯ ಆಚಾರ್ಯ' ಪ್ರಶಸ್ತಿ. |
| ೧೭.೮.೧೯೬೬ | ಪತ್ನಿ ವಿಯೋಗ. |
| ೧೯೬೮ | 'ಪದ್ಮಶ್ರೀ' ಪ್ರಶಸ್ತಿ ; ಮೈಸೂರಿನಲ್ಲಿ ಸನ್ಮಾನ; ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್. |
| ೧೯೬೯ | ಕೇಂದ್ರ ಸಾಹಿತ್ಯ ಅಕಾಡೆಮಿ, ದೆಹಲಿ ಅವರಿಂದ 'ಫೆಲೋ' ಪದವಿ ನೀಡಿಕೆ. |
| ೧೯೭೨ | 'ಕರ್ನಾಟಕ ಕವಿ ಕುಲತಿಲಕ' ಪ್ರಶಸ್ತಿ ಶ್ರೀ ಅದಮಾರು ಮಠ, ಉಡುಪಿ ಇವರಿಂದ, ಕರ್ನಾಟಕ ಸರ್ಕಾರದಿಂದ ಸಾಕ್ಷ್ಯಚಿತ್ರ ತಯಾರಿಕೆ. |
| ೧೯೭೨ | ೭೫ನೇ ಹುಟ್ಟುಹಬ್ಬದ ನಿಮಿತ್ತ ಸೊಲ್ಲಾಪುರದಲ್ಲಿ ಮತ್ತು ಪುಣೆಯಲ್ಲಿ ಸನ್ಮಾನ. |
| ೧೯೭೪ | 'ನಾಕುತಂತಿ' ಕವನ ಸಂಕಲನಕ್ಕೆ ಜ್ಞಾನಪೀಠ ಪ್ರಶಸ್ತಿ. |
| ೧೯೭೬ | ಕಾಶೀವಿದ್ಯಾಪೀಠ, ವಾರಾಣಸಿಯಿಂದ ಗೌರವ ಡಾಕ್ಟರೇಟ್. |
| ೨೬.೧೦.೧೯೮೧ | ನಿರ್ವಾಣ : ಮುಂಬಯಿಯಲ್ಲಿ, ದುರ್ಮತಿ ಸಂವತ್ಸರ ಆಶ್ವಯುಜ ಬಹುಳ, ದೀಪಾವಳಿ, ನರಕಚತುರ್ದಶಿ. |

## ಕಾವ್ಯಗಳು

### ಕವನ ಸಂಗ್ರಹಗಳು

| | | | |
|---|---|---|---|
| ೧೯೨೨ | ಕೃಷ್ಣಾಕುಮಾರಿ | ೧೯೫೧ | ಗಂಗಾವತರಣ |
| ೧೯೩೨ | ಗರಿ | ೧೯೫೬ | ಸೂರ್ಯಪಾನ |
| ೧೯೩೪ | ಮೂರ್ತಿ–ಕಾಮಕಸ್ತೂರಿ | ೧೯೫೬ | ಅರಳು–ಮರಳು |
| ೧೯೩೪ | ಸಖೀಗೀತ | ೧೯೫೬ | ಹೃದಯಸಮುದ್ರ |
| ೧೯೩೮ | ಉಯ್ಯಾಲೆ | ೧೯೫೬ | ಮುಕ್ತಕಂಠ |
| ೧೯೩೪ | ನಾದಲೀಲೆ | ೧೯೫೬ | ಚೈತ್ಯಾಲಯ |
| ೧೯೪೩ | ಮೇಘದೂತ | ೧೯೫೭ | ಜೀವಲಹರಿ |
| ೧೯೪೬ | ಹಾಡು–ಪಾಡು | ೧೯೫೮ | ನಮನ |

೧೯೫೯ ಸಂಚಯ
೧೯೬೦ ಉತ್ತರಾಯಣ
೧೯೬೧ ಮುಗಿಲಮಲ್ಲಿಗೆ
೧೯೬೨ ಯಕ್ಷ–ಯಕ್ಷಿ
೧೯೬೪ ನಾಕುತಂತಿ
೧೯೬೬ ಮರ್ಯಾದೆ
೧೯೬೮ ಶ್ರೀಮಾತಾ
೧೯೬೮ ಬಾಹತ್ತರ
೧೯೭೦ ಇದು ನಭೋವಾಣಿ
೧೯೭೨ ವಿನಯ
೧೯೭೩ ಮತ್ತೆ ಶ್ರಾವಣಾ ಬಂತು
೧೯೭೭ ಒಲವೆ ನಮ್ಮ ಬದುಕು
೧೯೭೪ ಚತುರೋಕ್ತಿ
೧೯೮೨ ಪರಾಕಿ
೧೯೮೨ ಕಾವ್ಯವೈಖರಿ
೧೯೮೩ ಬಾಲಬೋಧೆ
೧೯೮೩ ತಾ ಲೆಕ್ಕಣಿಕೆ ತಾ ದೌತಿ

## ವಿಮರ್ಶೆ

೧೯೩೬ ಸಾಹಿತ್ಯ ಮತ್ತು ವಿಮರ್ಶೆ
೧೯೪೦ ಸಾಹಿತ್ಯ ಸಂಶೋಧನೆ
೧೯೪೫ ವಿಚಾರ ಮಂಜರಿ
೧೯೫೪ ಕವಿಲಕ್ಷ್ಮೀಶನ ಜೈಮಿನಿ ಭಾರತಕ್ಕೆ ಮುನ್ನುಡಿ
೧೯೫೯ ಮಹಾರಾಷ್ಟ್ರ ಸಾಹಿತ್ಯ
೧೯೬೨ ಕಾವ್ಯೋದ್ಯೋಗ
೧೯೬೮ ಕನ್ನಡ ಸಾಹಿತ್ಯದಲ್ಲಿ ನಾಲ್ಕು ನಾಯಕರತ್ನಗಳು
೧೯೭೪ ಸಾಹಿತ್ಯದ ವಿರಾಟ್ ಸ್ವರೂಪ
೧೯೭೬ ಕುಮಾರವ್ಯಾಸ
೧೯೭೯ ಮಾನವಧರ್ಮ ಮತ್ತು ಆಧುನಿಕ ಮಾನವ

## ನಾಟಕಗಳು

೧೯೨೦ ಗೋಲ್
೧೯೨೪ ತಿರುಕರ ಪಿಡುಗು
೧೯೨೫ ಸಾಯೋಆಟ
೧೯೩೪ ಜಾತ್ರೆ
೧೯೩೬ ಹಳೆಯ ಗೆಳೆಯರು
೧೯೩೬ ದೆವ್ವನ ಮನೆ
೧೯೩೬ ನಗೆಯ ಹೊಗೆ
೧೯೪೭ ಉದ್ಧಾರ
೧೯೪೯ ಮಂದೀ ಮದಿವಿ
೧೯೭೬ ಮಕ್ಕಳು ಅಡಿಗಿಮನಿ ಹೊಕ್ಕರೆ
೧೯೮೦ ಶೋಭನಾ
೧೯೮೦ ಆಥರಾ–ಈಥರಾ
೧೯೮೧ ಮಂದೀ ಮನಿ

## ಸಣ್ಣ ಕತೆ, ಹರಟೆ

೧೯೪೦ ನಿರಾಭರಣಸುಂದರಿ

## ಭಾಷಣಗಳು

೧೯೭೧ ಮಾತೆಲ್ಲ ಜ್ಯೋತಿ

## ಕನ್ನಡಕ್ಕೆ ಅನುವಾದ

೧೯೨೮ ಉಪನಿಷತ್ ರಹಸ್ಯ, ಮೂಲ: ಇಂಗ್ಲಿಷ್ ಗ್ರಂಥ : ಗುರುದೇವ ರಾನಡೆಯವರದು
೧೯೩೬ ಭಾರತೀಯ ನವಜನ್ಮ, ಮೂಲ: ಇಂಗ್ಲಿಷ್ ಗ್ರಂಥ : ಶ್ರೀ ಅರವಿಂದರದು

೧೯೪೭ ಶ್ರೀ ಅರವಿಂದರಯೋಗ, ಆಶ್ರಮ ಮತ್ತು ತತ್ತ್ವೋಪದೇಶ

೧೯೬೬ ಗುರುಗೋವಿಂದಸಿಂಗ್, ಮೂಲ : ಇಂಗ್ಲಿಷ್ , ಗುರುಗೋವಿಂದಸಿಂಗ್ ಸಂಸ್ಥೆ, ಚಂಡೀಗಢ ಸಲುವಾಗಿ

೧೯೬೭ ನೂರೊಂದು ಕವನ, ಮೂಲ: ರವೀಂದ್ರನಾಥ ಟಾಗೋರ್, ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ

೧೯೬೮ ಕಬೀರ ವಚನಾವಲಿ, ಮೂಲ: ಹಿಂದಿ, ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ

೧೯೭೨ ಭಗ್ನಮೂರ್ತಿ, ಮೂಲ : ಮರಾಠಿ : ಶ್ರೀ ಅ.ರಾ. ದೇಶಪಾಂಡೆ, ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ

## ಮರಾಠಿ ಕೃತಿಗಳು

೧೯೬೫ ಸಂವಾದ : ಕವನ ಮತ್ತು ವಿಮರ್ಶೆ, ಲೇಖನ ಇವುಗಳ ಸಂಗ್ರಹ

೧೯೬೫ ವಿಟ್ಠಲ ಸಂಪ್ರದಾಯ ಒಂದು ಭಾಷಣ

೧೯೭೨ ಶಾಂತಲಾ, ಮೂಲ : ಕನ್ನಡ, ಕೆ.ವಿ. ಅಯ್ಯರ್, ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ

೧೯೮೦ ಸಂತ ಮಹಂತಾಂಚಾ ಪೂರ್ಣ ಶಂಭೋವಿಟ್ಠಲ

## ಇಂಗ್ಲಿಷ್ ಕೃತಿ

೧೯೭೭ *A Theory of Immortality* - A probable problem and a possible solution.

* * *

# ಲೇಖಕರ ಕೃತಿಗಳು

೧. ಹಾಡುಹಕ್ಕಿ ಅಂಬಿಕಾತನಯದತ್ತ (೧೯೯೫)
ಎರಡನೆ ಆವೃತ್ತಿ ೨೦೦೯

೨. ಡಿ.ಆರ್. ಬೇಂದ್ರೆ (೧೯೯೭)
ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಆಂಗ್ಲಕೃತಿ

೩. ನಾಕುತಂತಿ – ಒಂದು ಟಿಪ್ಪಣಿ (೨೦೦೦)
ಎರಡನೆ ಆವೃತ್ತಿ ೨೦೧೦

೪. ರಸ್ತೆ ನಿಯಮಗಳು (೨೦೦೦)
ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಕೃತಿ

೫. ಹೂತಽದ ಹುಣಸಿ (೨೦೦೦)
(ದ.ರಾ. ಬೇಂದ್ರೆ ಕಾವ್ಯ ವಿಮರ್ಶೆ)

೬. ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ–ಒಂದು ಅಧ್ಯಯನ (೨೦೦೧)
(ಪಿ.ಎಚ್.ಡಿ., ಮಹಾ ಪ್ರಬಂಧ)

೭. ಬರೆಹದಲ್ಲಿ ಬೇಂದ್ರೆಯವರ ಬದುಕು (೨೦೦೮)
ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ಧಾರವಾಡ ಪ್ರಕಟಿಸಿರುವ ಕೃತಿ

# ಅಭಿಪ್ರಾಯಗಳು

ಎಲ್ಲ ರೀತಿಯ ಓದುಗರಿಗೂ ತಲುಪುವಂಥ ಸುಲಭ ಶೈಲಿಯಲ್ಲಿ ಅಂಬಿಕಾತನಯ ದರ್ಶನ ಈ ಕೃತಿಯಲ್ಲಿ ಸಾರ್ಥಕವಾಗಿ ಆಗಿದೆ. ಇದೊಂದು ಅಪರೂಪ ಪ್ರಯತ್ನ ಎನ್ನಲೇಬೇಕು.

**ತುಷಾರ**

ಸಾರಿಗೆ ಇಲಾಖೆಯಲ್ಲಿ ಕೆಲಸ ಮಾಡುತ್ತಲೇ ಸಾಹಿತ್ಯದಲ್ಲಿ ಡಾಕ್ಟರೇಟ್ ಪಡೆದ ರಾಜ್ಯದ ಮೊದಲವ್ಯಕ್ತಿ ಜಿ. ಕೃಷ್ಣಪ್ಪ ಅವರು. ಕೃಷ್ಣಪ್ಪ ಅವರಿಗೆ ಬೇಂದ್ರೆಯವರ ಕವಿತೆಗಳನ್ನು ಆರಾಧಿಸುವ ಹುಚ್ಚು. ಸಾರಿಗೆ ಇಲಾಖೆಯಲ್ಲಿ ಕೃಷ್ಣಪ್ಪನವರಂತವರು ಸಿಗುವುದು ಅಪರೂಪ. ದಿ. ದ.ರಾ. ಬೇಂದ್ರೆ ಜಗತ್ತಿನ ಕಾವ್ಯಕ್ಷೇತ್ರದಲ್ಲಿಯೇ ಅಪರೂಪದ ಕವಿ ಎಂಬ ನಂಬಿಕೆ ಅವರದು. ಬೇಂದ್ರೆ ಅವರ ಕಾವ್ಯ ಪ್ರಚಾರ ಕೃಷ್ಣಪ್ಪನವರ ಇನ್ನೊಂದು ಹವ್ಯಾಸ. ಬೇಂದ್ರೆ ಸಾಹಿತ್ಯವನ್ನು ಕೃಷ್ಣಪ್ಪನವರಷ್ಟು ಹಚ್ಚಿಕೊಂಡ ವ್ಯಕ್ತಿ ಮತ್ತೊಬ್ಬರು ಸಿಗುವುದು ಅಪರೂಪ.

**ಪ್ರೇಮಕುಮಾರ್ ಹರಿಯಬ್ಬೆ**

ದಾನ ಚಿಂತಾಮಣಿ ಅತ್ತಿಮಬ್ಬೆಯು ಹತ್ತನೇ ಶತಮಾನದಲ್ಲಿ ಪೊನ್ನನ 'ಶಾಂತಿಪುರಾಣ'ದ ಒಂದು ಸಾವಿರ ಪ್ರತಿಮಾಡಿಸಿ ಹಂಚಿದ್ದಳು. ಅದರ ನಂತರ ಕರ್ನಾಟಕದಲ್ಲಿ ವರಕವಿ ಬೇಂದ್ರೆ ಕಾವ್ಯದ ಸಹಸ್ರಾರು ಪ್ರತಿಗಳನ್ನು ಕೊಂಡು ನಾಡಿನಾದ್ಯಂತ ಪುಕ್ಕಟೆ ಹಂಚಿದ್ದು ಡಾ॥ ಜಿ. ಕೃಷ್ಣಪ್ಪನವರ ಮಹತ್ ಸಾಧನೆಯೆಂದೇ ಹೇಳಬೇಕು........... ಒಟ್ಟು ಬೇಂದ್ರೆಕಾವ್ಯದ ಹುಚ್ಚನ್ನು ತಾವು ಹೋದಲ್ಲೆಲ್ಲಾ ನಮ್ಮ ಮಕ್ಕಳಲ್ಲಿ ಹರಡುತ್ತಿರುವ, ಬೇಂದ್ರೆ ಕಾವ್ಯದ ವಿಮರ್ಶಕರಲ್ಲಿ ಗಣ್ಯಸ್ಥಾನ ಪಡೆದಿರುವ ಜಿ. ಕೃಷ್ಣಪ್ಪನವರ ಕನ್ನಡ ಸೇವೆಯನ್ನು ಯಾರೂ ಮೆಚ್ಚದಿರರು.

**ಪ್ರೊ॥ ವೀರೇಂದ್ರಸಿಂಪಿ**

('ಸಾಹಿತ್ಯ ಸೌರಭ' ಕೃತಿಯಲ್ಲಿ)

ನಮ್ಮ ವಿಷಯ ಬೋಧಕರಿಗೆ ಬೇಂದ್ರೆಕಾವ್ಯ ಕೆಲವೊಮ್ಮೆ ಕಬ್ಬಿಣದ ಕಡಲೆ ಆಗುತ್ತಿದ್ದುದ್ದೂ ಉಂಟು. ಆದರೆ ಡಾ॥ ಜಿ. ಕೃಷ್ಣಪ್ಪನವರಿಂದ ಬೇಂದ್ರೆ ಅಜ್ಜ ಎಲ್ಲರ ಅರಿವಿಗೆ ಅಳವಿಗೆ ಬರುವಂತಾದರು. ಹೃದಯ ಹೃದಯದಲ್ಲಿ ನೆಲೆ ನಿಲ್ಲುವಂತಾದರು.

**ಡಿ.ಎನ್. ಅಕ್ಕಿ**

('ಶಿಕ್ಷಕನ ಮನದಾಳದಿಂದ' ಕೃತಿಯಲ್ಲಿ)

# ಡಾ॥ ಜಿ. ಕೃಷ್ಣಪ್ಪ

ಕವಿಗಳು ಸಾಮಾನ್ಯವಾಗಿ ಸ್ವಂತ ಖುಷಿಗಾಗಿ ಕಾವ್ಯ ರಚನೆ ಮಾಡುತ್ತಾರೆ. ಇತರರು ಓದಿ ಅಥವಾ ಕೇಳಿ ಖುಷಿಪಡಬೇಕೆಂದೂ ಬಯಸುತ್ತಾರೆ. ಸಹೃದಯರು ಇತರರ ಕವನಗಳನ್ನು ಓದಿ ಸಂತೋಷಪಡುತ್ತಾರೆ. ಆದರೆ ಅವರಲ್ಲಿ ಕೆಲವರು ಅಲ್ಲಿಗೇ ನಿಲ್ಲುವುದಿಲ್ಲ. ಇತರರೂ ಅವನ್ನು ಆಸ್ವಾದಿಸಬೇಕೆಂದು ಬಯಸುತ್ತಾರೆ. ಇಂಥವರಲ್ಲಿ ಜಿ. ಕೃಷ್ಣಪ್ಪ ಒಬ್ಬರು.

ಜಿ. ಕೃಷ್ಣಪ್ಪ (೧೯೪೮) ಬೆಂಗಳೂರಿನವರು. ಧರ್ಮರಾಯಸ್ವಾಮಿ ದೇವಸ್ಥಾನದ ಬಳಿಯ ಗೊಲ್ಲರಪೇಟೆಯಲ್ಲಿ ಹುಟ್ಟಿದ ಕೃಷ್ಣಪ್ಪನವರ ತಂದೆ ಹೆಚ್. ಗಂಗಯ್ಯ, ತಾಯಿ ಸಾವಿತ್ರಮ್ಮ. ತಂದೆಗೆ ಲಕ್ಷ್ಮೀಶನ ಜೈಮಿನಿ ಭಾರತ ಓದುವ ಗೀಳು. ತಾಯಿಗೆ ಹಳ್ಳಿಯ ಹಾಡುಗಳು ಪ್ರೀತಿ. ಜನಪದ ಕತೆಗಳನ್ನು ಒಕ್ಕಣಿಸುವ ಹಂಬಲ. ಬಡತನದಲ್ಲಿ ಸಾಹಿತ್ಯದ ಶ್ರೀಮಂತಿಕೆ. ಕೃಷ್ಣಪ್ಪ ಬೆಳದದ್ದು ಈ ವಾತಾವರಣದಲ್ಲಿ.

ಬೆಂಗಳೂರಿನಲ್ಲೇ ಓದು (ಕಾರ್ಪೊರೇಷನ್ ಶಾಲೆ, ಎಸ್.ಜೆ. ಪಾಲಿಟೆಕ್ನಿಕ್). ಆಟೊಮೊಬೈಲ್ ಇಂಜಿನಿಯರಿಂಗ್ ಶಿಕ್ಷಣ. ರಾಜ್ಯ ಸಾರಿಗೆ ಸಂಸ್ಥೆಯಲ್ಲಿ ಮೆಕಾನಿಕ್. ಆ ಮೇಲೆ ಮೋಟಾರ್ ವಾಹನಗಳ ನಿರೀಕ್ಷಕ ಹುದ್ದೆ. ಅದರಲ್ಲೇ ಮೇಲ್ಮೆಯ ಸಾಧನೆ.

ಈ ಕಿರಿಕಿರಿಯ ನಡುವೆ ಉನ್ನತ ಶಿಕ್ಷಣ. ಬೆಂಗಳೂರು ವಿಶ್ವವಿದ್ಯಾಲಯದ ಬಿ.ಎ., ಎಲ್.ಎಲ್.ಬಿ., ಮೈಸೂರಿನ ಎಂ.ಎ. . ಇಷ್ಟಕ್ಕೇ ನಿಲ್ಲಲಿಲ್ಲ ಇವರ ಅಧ್ಯಯನ. 'ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ' ಎಂಬ ವಿಷಯ ಕುರಿತು ಡಾಕ್ಟರೇಟ್‌ಗಾಗಿ ಸಂಶೋಧನೆ.

ಚಿಕ್ಕಂದಿನ ಕಾವ್ಯದ ಗುಂಗು. ತಂದೆಯಿಂದ ಗಳಿಸಿದ ಆಸ್ತಿ. ಕೃಷ್ಣಪ್ಪನವರು ಬೇಂದ್ರೆಯವರ ಹುಚ್ಚು ಹತ್ತಿಸಿಕೊಂಡರು. ಸ್ವತಃ ರಾಗವಾಗಿ ಕಾವ್ಯವಾಚನ

ಮಾಡಬಲ್ಲ ಕೃಷ್ಣಪ್ಪನವರು ತಮ್ಮ ಅಧಿಕಾರದ ನಿಮಿತ್ತ ವರ್ಗವಾಗಿ ಹೋದಲ್ಲೆಲ್ಲ ಮಕ್ಕಳಿಗೆ ಬೇಂದ್ರೆಯವರ ಬಗ್ಗೆ ಹುಚ್ಚು ಹಿಡಿಸುತ್ತಾರೆ. ವಿದ್ಯಾರ್ಥಿಗಳಿಗೆ ಬೇಂದ್ರೆ ಕವನ ಗಾಯನ ಸ್ಪರ್ಧೆಯ ಏರ್ಪಾಡು.

ಗೋಕಾಕ, ಬೆಳಗಾವಿ, ಕ್ಯಾಸಂಬಳ್ಳಿ, ದೊಡ್ಡ ಪೊನ್ನಾಂಡಹಳ್ಳಿ, ಕೋಲಾರ, ಕೆಜಿಎಫ್, ಮೈಸೂರು, ನಾಗಮಂಗಲ, ಬನ್ನೂರು, ಮಧುಗಿರಿ, ಮಂಡ್ಯ ಹೀಗೆ ಎಲ್ಲೆಲ್ಲೂ ಬೇಂದ್ರೆ ಝೇಂಕಾರ. ಈಗ ಧಾರವಾಡದಲ್ಲಿ. ಒಟ್ಟು ನೂರಾರು ಕಾರ್ಯಕ್ರಮ. ಸ್ಪರ್ಧೆಗಳಲ್ಲಿ ಭಾಗವಹಿಸಿದವರಿಗೆಲ್ಲ ಬೇಂದ್ರೆಯವರ ಪುಸ್ತಕಗಳ ಕೊಡುಗೆ.

ಬೇಂದ್ರೆ ಶತಮಾನೋತ್ಸವದ ಆಚರಣೆ. ಬೇಂದ್ರೆ ಜೀವನ ಕಾವ್ಯ ಕುರಿತ ನೃತ್ಯರೂಪಕ ಧ್ವನ್ಯಾಲೋಕದಲ್ಲಿ. ಆಹಾರ ಸಂಶೋಧನಾಲಯದಲ್ಲಿ. ಒಬ್ಬ ಕವಿಯ ಬಗ್ಗೆ ಈ ರೀತಿ ಹುಚ್ಚುಹಿಡಿಸಿಕೊಂಡು ಇತರರಿಗೂ ಅದರ ಸವಿ ಹಂಚುವವರು ಬಹಳ ಇಲ್ಲ.

'ಘನ ಘನಂಗಳ ಬಂಧ ಸಂಬಂಧದರಿವಿನಲೆ ಹೊತ್ತು ಹೊತ್ತುತ್ತಲಿದೆ. ಹೊತ್ತು ಹೊಳೆಯುತ್ತಲಿದೆ' ಎಂಬ ಬೇಂದ್ರೆ ವಾಣಿಯನ್ನು ಸಾರ್ಥಕಗೊಳಿಸುತ್ತಿರುವ ಕೃಷ್ಣಪ್ಪನವರು ಇಂಗ್ಲಿಷ್‌ನಲ್ಲಿ ಬರೆದಿರುವ 'ಡಿ ಆರ್ ಬೇಂದ್ರೆ' ಎಂಬ ಕೃತಿಯನ್ನು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿದೆ. 'ಹಾಡುಹಕ್ಕಿ ಅಂಬಿಕಾತನಯದತ್ತ' ಇವರ ಇನ್ನೊಂದು ಪುಸ್ತಕ. ರಸ್ತೆ ನಿಯಮಗಳನ್ನು ಕುರಿತೂ ಇವರು ಕೃತಿ ರಚಿಸಿದ್ದಾರೆ.

ಎಚ್ಚೆಸ್ಕೆ

# "ಕಾಮಧೇನು" ಪ್ರಕಾಶನದ ಕೆಲವು ಪ್ರಕಟಣೆಗಳು

| | | |
|---|---|---|
| ಭಾರತದ ಸಂವಿಧಾನ – ಪಕ್ಷಿನೋಟ | ಶ್ರೀ ನೇ.ತಿ. ಸೋಮಶೇಖರ | 200.00 |
| ಹಿಮಾಲಯದ ಮಹಾತ್ಮರ ಸನ್ನಿಧಿಯಲ್ಲಿ | ಕನ್ನಡ ಅನುವಾದ: ಸ್ವಾಮಿರಾಮ | 250.00 |
| ಪರಮಾರ್ಥ ಪದಕೋಶ | ಸಂ: ಅ.ರಾ.ಸೇ. | 270.00 |
| ಕುಮಾರವ್ಯಾಸ ಭಾರತ | ಸಂ: ಅ.ರಾ.ಸೇ. | 1800.00 |
| ಸಮಗ್ರ ಕಾವ್ಯ | ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ | 250.00 |
| ಸೌಂದರ್ಯ ಸಮೀಕ್ಷೆ | ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ | 300.00 |
| ಕಾವ್ಯಾರ್ಥ ಪದಕೋಶ | ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ ಹಾಗೂ ಡಾ. ಕೆ.ವಿ. ನಾರಾಯಣ | 150.00 |
| ಕಾವ್ಯಾರ್ಥ ಚಿಂತನ | ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ | 80.00 |
| ಪತ್ರಿಕೋದ್ಯಮ – ಸಮಗ್ರ ಸಂಪುಟ | ಜಿ.ಎನ್. ರಂಗನಾಥರಾವ್ | 650.00 |
| ಬ್ರಹ್ಮಸೂತ್ರಗಳು | ಕನ್ನಡ ಅನುವಾದ: ಅ.ರಾ.ಸೇ. | 150.00 |
| ಅನ್ ಟು ದಿ ಲಾಸ್ಟ್ | ಕನ್ನಡ ಅನುವಾದ: ಜಿ.ಎಂ.ಕೃಷ್ಣಮೂರ್ತಿ | 75.00 |
| ಡಾ। ಸಿದ್ದಲಿಂಗಯ್ಯನವರ ಸದನದ ಭಾಷಣಗಳು | ಸಂ: ದೊಡ್ಡಹುಲ್ಲೂರು ರುಕ್ಕೋಜಿ | 200.00 |
| ಅಂಬೇಡ್ಕರ್ | ಜಿ.ಎಂ. ಕೃಷ್ಣಮೂರ್ತಿ | 125.00 |
| ಸಾಹಿತ್ಯಲೋಕದ ನೆನಪುಗಳು | ಪ್ರೊ। ಎಸ್. ರಾಮಸ್ವಾಮಿ | 200.00 |
| ಗೀತಾಂಜಲಿ | ಕನ್ನಡ ಅನುವಾದ: ಮಹಿಪಾಲ ದೇಸಾಯಿ | 150.00 |

| | | |
|---|---|---|
| ಶಿಶುನಾಳ ಶರೀಫರ ನೂರಾರು ತತ್ವಪದಗಳು ವ್ಯಾಖ್ಯಾನ ಸಹಿತ | ಸಂ: ಅ.ರಾ.ಸೇ. | 120.00 |
| ಹೂವು ಮತ್ತು ಆರೋಗ್ಯ | ಡಾ। ವಸುಂಧರಾ ಭೂಪತಿ | 160.00 |
| ಮೃಗ | ಕೆ.ಎನ್. ವೆಂಕಟಸುಬ್ಬರಾವ್ | 150.00 |
| ಛಂದೋಮಿತ್ರ | ಅ.ರಾ. ಮಿತ್ರ | 45.00 |
| ತಟ್ಟು ಚಪ್ಪಾಳೆ ಪುಟ್ಟಮಗು (ಮಕ್ಕಳ ಕವಿತೆಗಳು) | ಬೊಳುವಾರು | 45.00 |
| ಆಕಾಶಕ್ಕೆ ನೀಲಿ ಪರದೆ (ಕಥಾ ಸಂಕಲನ) ಸಾಹಿತ್ಯ ಅಕಾಡೆಮಿ: ವರ್ಷದ ಶ್ರೇಷ್ಠ ಕೃತಿ ಪ್ರಶಸ್ತಿ ಪಡೆದ ಕೃತಿ) | ಬೊಳುವಾರು | 60.00 |
| ಅಂಕ (ಕಥಾ ಸಂಕಲನ) | ಬೊಳುವಾರು | 42.00 |
| ಸಮಗ್ರ ಗದ್ಯ ಭಾಗ–3 | ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ | 150.00 |
| ಸಮಗ್ರ ಗದ್ಯ ಭಾಗ–4 | ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ | 200.00 |
| ಕಥಾ ಭಾರತ | ತ.ಸು. ಶಾಮರಾಯ | 120.00 |
| ಆಲೋಕ (ಶಬ್ದಮಣಿ ದರ್ಪಣ ಭಾಷ್ಯ, ಭಾಗ–1) | ಎಚ್.ಎಸ್. ಬಿಳಿಗಿರಿ | 90.00 |
| ಗಿಣಿ ಹೇಳಿದ ಅಪೋಲಿ ಕತೆಗಳು | ಶೇಷ | 60.00 |
| ಅಂಗಾರಕ ಗ್ರಹದತ್ತ (ಶಿಶುಸಾಹಿತ್ಯ) | ಎಸ್. ಸೌಮ್ಯ | 45.00 |
| ಭಾಷಣ ಕಲೆ | ಜಿ.ಎಂ. ಕೃಷ್ಣಮೂರ್ತಿ | 100.00 |
| ಹೊಸ ತಿರುವು (ವಿಮರ್ಶಾ ಲೇಖನಗಳು) | ಜಿ.ಎನ್. ರಂಗನಾಥರಾವ್ | 60.00 |
| ಕಚ್ಚಾದ (ಕಾದಂಬರಿ) | ಫಕೀರ್ ಮಹಮ್ಮದ್ ಕಟ್ಪಾಡಿ | 60.00 |

| | | |
|---|---|---|
| ಆರ್ಥಿಕ ಚಿಂತನೆ | ನೇ.ತಿ. ಸೋಮಶೇಖರ್ | 150.00 |
| ಅಂತಾರಾಷ್ಟ್ರೀಯ ಅರ್ಥಶಾಸ್ತ್ರ | ನೇ.ತಿ. ಸೋಮಶೇಖರ್ | 150.00 |
| ದೇವೀ ಮಹಾತ್ಮೆ | ಸಂ: ಅ.ರಾ.ಸೇ. | 95.00 |
| ಆಯ್ದ ರಶಿಯನ್ ಕಥೆಗಳು | ಅನುವಾದ: ಸುತ್ರಾವೆ | 35.00 |
| ಸಂವಾದ ಕಲೆ | ಜಿ.ಎಂ. ಕೃಷ್ಣಮೂರ್ತಿ | 60.00 |
| ವ್ಯಕ್ತಿತ್ವ ವಿಕಸನ – ಇಪ್ಪತ್ತು ಸೂತ್ರಗಳು | ಜಿ.ಎಂ. ಕೃಷ್ಣಮೂರ್ತಿ | 45.00 |
| ವ್ಯಕ್ತಿತ್ವ ವಿಕಸನ – ಧ್ಯಾನ–ಧರ್ಮ | ಜಿ.ಎಂ. ಕೃಷ್ಣಮೂರ್ತಿ | 45.00 |
| ಕಾವೇರಿಯ ಮಡಿಲಿನಿಂದ ಸಾಗರ ಸಂಗಮದಂಚಿಗೆ | ಎಲ್. ಸುಬ್ರಹ್ಮಣ್ಯ | 60.00 |
| ವ್ಯವಹಾರ ಅಧ್ಯಯನ | ಎಂ.ಆರ್. ನರಸಿಂಹಪ್ರಸಾದ್ | 100.00 |
| ನಿರ್ವಹಣಾ ತತ್ವಗಳು | ಎಂ.ಆರ್. ನರಸಿಂಹಪ್ರಸಾದ್ | 100.00 |
| ಭಾರತೀಯ ಸಮಾಜದ ಸಮಾಜಶಾಸ್ತ್ರ | ಡಾ. ಎಂ.ಪಿ. ಶಂಕರಪ್ಪ | 120.00 |
| ಸಮಾಜಶಾಸ್ತ್ರದ ಮೂಲತತ್ವಗಳು | ಡಾ. ಎಂ.ಪಿ. ಶಂಕರಪ್ಪ | 120.00 |
| ಭೂಮಿಗಾಥೆ | ಡಾ. ವಸುಂಧರಾ ಭೂಪತಿ | 60.00 |
| ಬೊಳುವಾರರ ಆಯ್ದ ಕಥೆಗಳು | ಸಂ: ಡಿ.ಕೆ. ಶ್ಯಾಮಸುಂದರರಾವ್ | 60.00 |
| Teacher Education in Karnataka | ಡಾ. ಶ್ರೀಪಾದ್ ಬೊಳಸೆಟ್ಟಿ | 300.00 |
| Content Based Methodology of Teaching English | ಎಂ.ಆರ್. ನರಸಿಂಹಪ್ರಸಾದ್ | 90.00 |

ಮೋಟಾರು ವಾಹನಗಳ ಪರಿವೀಕ್ಷಕರಾದ ಶ್ರೀ ಜಿ. ಕೃಷ್ಣಪ್ಪನವರು ಬೇಂದ್ರೆ ಕಾವ್ಯವೈಭವಕ್ಕೆ ಮನಸೋತು ಅದರ ಅಧ್ಯಯನ, ಚಿಂತನ, ಮನನ, ಪ್ರಸರಣಗಳಿಗೆ ತಮ್ಮನ್ನು ಸಮರ್ಪಿಸಿಕೊಂಡದ್ದು ಕನ್ನಡ ಸಾಹಿತ್ಯದ ಭಾಗ್ಯವೇ ಸರಿ. "ಆದದ್ದೆಲ್ಲ ಒಳಿತೇ ಆಯಿತು; ಬೇಂದ್ರೆಯ ಕಾವ್ಯವ ಸೇವಿಸುವುದಕ್ಕೆ ಸಾಧನಸಂಪತ್ತಾಯಿತು." 'ಹಾಡುಹಕ್ಕಿ ಅಂಬಿಕಾತನಯದತ್ತ'ದ ಮೂಲಕ ಅವರು ಬೇಂದ್ರೆ ಕಾವ್ಯಾಧ್ಯಯನದ ಕ್ಷೇತ್ರದಲ್ಲಿ ದೊಡ್ಡ ಹೆಜ್ಜೆಯಿಟ್ಟಿದ್ದಾರೆ. ಕೃಷ್ಣಪ್ಪನವರಂತಹ ಸಹೃದಯರ ಸಂತತಿ ಸಾವಿರವಾಗಬೇಕು; ಅವರು ಹಿಡಿಸುವ ಬೇಂದ್ರೆ ಕೃತಿಗಳ ಗುಂಗನ್ನು ಎಲ್ಲರೂ ಹಿಡಿಸಿಕೊಳ್ಳುವಂತಾಗಬೇಕು.

ಡಾ॥ ಕೆ. ಅನಂತರಾಮು

ಕವಿಬೇಂದ್ರೆ ಅವರ ಕಟ್ಟಾಅಭಿಮಾನಿ, ಅವರ ಕೃತಿಗಳೆಲ್ಲವನ್ನೂ ಗೌರವಪೂರ್ವಕ ಅಧ್ಯಯನ ಮಾಡಿರುವವರು, ಅವರನ್ನು ಕೆಲಸಲ ಭೇಟಿ ಮಾಡಿರುವವರು, ಅವರ ಉಪನ್ಯಾಸ ನಡೆದಲ್ಲೆಲ್ಲ ಓಡಿಹೋಗುತ್ತಿದ್ದವರು, ಅಂಥವರೊಬ್ಬರ ಆತ್ಮೀಯ 'ಬೇಂದ್ರೆನೋಟ' ಈ ಕೃತಿ. ಕೆಲವರು ಕಾಣದ್ದನ್ನು ಇವರು ಕಂಡಿದ್ದಾರೆ.

ಕರ್ಮವೀರ

ಡಾ॥ ಜಿ. ಕೃಷ್ಣಪ್ಪನವರು ರಚಿಸಿರುವ ಈ ಕೃತಿಯಲ್ಲಿ ಬೇಂದ್ರೆಯವರ ಜೀವನ ವೃತ್ತಾಂತದ ಸ್ಥೂಲ ಚಿತ್ರಣವಿದೆ. 'ಸಾಹಿತ್ಯಸಿದ್ಧಿ: ಕಾವ್ಯ' ವಿಭಾಗದಲ್ಲಿ ಗರಿ, ಎಂಟು ಎದೆಯ ಬಂಟ ಬಡವ, ಮಕ್ಕಳ ಬೇಂದ್ರೆ, ಮಾತೃ ಪ್ರಜ್ಞೆ, ಶ್ರಾವಣ, ಪ್ರೇಮಗೀತೆಗಳು, ಒಲುಮೆಯ ಕಿಚ್ಚು, ವ್ಯಕ್ತಿ ವಿಶಿಷ್ಟ ಕವನಗಳು, ಅನುಭಾವ ಗೀತೆಗಳು ಎಂಬ ಒಂಭತ್ತು ವಿಭಾಗಗಳಲ್ಲಿ ಬೇಂದ್ರೆಯವರ ಪ್ರಮುಖ ಕವನಗಳನ್ನು ವಿಮರ್ಶಿಸಲಾಗಿದೆ. ವಿಮರ್ಶೆ ಎಲ್ಲ ಸಹೃದಯರಿಗೆ ಸುಲಭವಾಗಿ ಅರ್ಥವಾಗುವಂತಿದೆ ಹಾಗೂ ಆಳವಾದ ಒಳನೋಟಗಳಿಂದ ಕೂಡಿದೆ. ಬೇರೆಬೇರೆ ಸಾಹಿತ್ಯ ಪ್ರಕಾರಗಳಲ್ಲಿ ಬೇಂದ್ರೆಯವರು ರಚಿಸಿರುವ ಕೃತಿಗಳ ಪರಾಮರ್ಶೆಯೂ ಇಲ್ಲಿದೆ. ಬೇಂದ್ರೆಯವರ ಕೆಲವು ಅಪರೂಪದ ಛಾಯಾಚಿತ್ರಗಳಿರುವುದು ಈ ಕೃತಿಯ ಇನ್ನೊಂದು ವಿಶೇಷ. ಸಾಹಿತ್ಯಾಸಕ್ತರೂ, ಬೇಂದ್ರೆ ಅಭಿಮಾನಿಗಳೂ ಅತ್ಯಗತ್ಯವಾಗಿ ಓದಲೇಬೇಕಾದ ಪುಸ್ತಕ 'ಹಾಡುಹಕ್ಕಿ ಅಂಬಿಕಾತನಯದತ್ತ'.

ಕಾಮಧೇನು ಪುಸ್ತಕ ಭವನ



ಕಾಮಧೇನು ಪುಸ್ತಕ ಭವನ

ನಂ. 5/1, ನಾಗಪ್ಪ ಬೀದಿ, ಶೇಷಾದ್ರಿಪುರ, ಬೆಂಗಳೂರು-560 020